ನಾಂಛಂತಿ ಯತ್ಪದಾಂಭೋಜಂ ದ್ರಷ್ಟುಂ ನಾರಾಯಣಾದಯಃ ।
ತೈರ್ನ ದೃಷ್ಟಂ ನ ಕೇನಾಪಿ ದ್ರಷ್ಟವ್ಯಮಧುನಾ ಪರಂ ॥೪೨॥

ತಪಸಾ ನಾತಿಘೋರೇಣ ಧರ್ಮೈರ್ವಾ ವಿವಿಧೈರಪಿ ।
ಪರಂ ತು ತದ್ಭವತ್ವದ್ಯ ಶಂಕರಾನುಗ್ರಹಾನ್ಮಮ ॥೪೩॥

ಇತ್ಯುಕ್ತ್ವಾ ಸತ್ವರಂ ಸಾಂಬಂ ಸ್ಮೃತ್ವಾ ಶಂಕರಪಾದುಕೇ ।
ಧ್ಯಾತ್ವಾ ಯಯೌ ಗಣಾಧೀಶಶ್ಶಿವಸನ್ನಿಧಿಮಾದರಾತ್ ॥೪೪॥

ತತಃ ಪ್ರಣಮ್ಯ ಬಹುಧಾ ಕೃತಾಂಜಲಿಪುಟಃ ಪ್ರಭುಂ ।
ಶಂಭುಂ ಸ್ತೋತುಂ ಮತಿಂ ಚಕ್ರೇ ಸರ್ವಾಭೀಷ್ಟಪ್ರದಾಯಕಂ॥೪೫॥

॥ ಗಣಾಧೀಶ ಉವಾಚ ॥

ನಮಸ್ತೇ ದೇವದೇವಾಯ ನಮಸ್ತೇ ರುದ್ರಮನ್ಯವೇ ।
ನಮಸ್ತೇ ಚಂದ್ರಚೂಡಾಯಾಪ್ಯುತೋತ ಇಷವೇ ನಮಃ ॥೪೬॥

---

ಶ್ರೀಮನ್ನಾರಾಯಣನೇ ಮೊದಲಾದ ದೇವತೆಗಳು ಶಿವನ ಅಡಿದಾವರೆಗಳನ್ನು ನೋಡಬಯಸುತ್ತಿರುವರು. ಅದು ಅವರಿಗೆ ಇದುವರೆಗೂ ಲಭಿಸಲಿಲ್ಲ. ಯಾರಿಗೂ ಲಭಿಸುವಂತೆಯೂ ಇಲ್ಲ. ಆದರೆ ಈಗ ನನಗೆ ಆ ಪಾದದರ್ಶನದ ಸುಯೋಗವು ಒದಗಿರುತ್ತದೆ. ||೪೨||

ಕಠಿನವಾದ ತಪಸ್ಸಿನಿಂದಾಗಲಿ ಅಥವಾ ಬಗೆಬಗೆಯ ಪುಣ್ಯಕರ್ಮಾಚರಣೆಗಳಿಂದಾಗಲಿ ಶಿವಪಾದದರ್ಶನವು ಲಭಿಸುವುದಿಲ್ಲ. ಆದರೆ ಈಗ ನನಗೆಮಾತ್ರ ಶಿವನ ಅನುಗ್ರಹದಿಂದ ಲಭಿಸುವಂತಿದೆ." ||೪೩||

ಎಂದು ಯೋಚಿಸಿ ಗಣಪತಿಯು ಅಂಬಾಸಹಿತನಾದ ಶಿವನನ್ನು ಸ್ಮರಿಸಿ, ಆವನ ಪಾದುಕೆಗಳನ್ನು ಧ್ಯಾನಿಸುತ್ತಾ ಶೀಘ್ರವಾಗಿ ಶಿವಸನ್ನಿಧಿಯನ್ನು ಕುರಿತು ತೆರಳಿದನು. ||೪೪||

ಬಳಿಕ ಅಂಜಲಿಬದ್ಧನಾಗಿ ಅನೇಕಬಾರಿ ಶಿವನನ್ನು ನಮಸ್ಕರಿಸಿ, ಸಕಲ ಇಷ್ಟಾರ್ಥಗಳನ್ನೂ ದಯಪಾಲಿಸುವ ಪರಮೇಶ್ವರನನ್ನು ಹೀಗೆ ಸ್ತುತಿಸತೊಡಗಿದನು. ||೪೫||

" ಓ ದೇವೇಶನೇ, ನಿನಗೆ ನಮಸ್ಕರಿಸುವೆನು. ನಿನ್ನ ಕೋಪಕ್ಕೆ ನಮಸ್ಕಾರ.

**ನಮಸ್ತೇ ಪಾರ್ವತೀಕಾಂತ ನಮಸ್ತೇ ಮೇರುಧನ್ವನೇ ।**
**ನಮಸ್ತೇ ಭಗವನ್ ಶಂಭೋ ಬಾಹುಭ್ಯಾಮುತ ತೇ ನಮಃ ॥೪೭॥**

**ಇಷುಃ ಶಿವತಮಾ ಯಾ ತೇ ತಯಾ ಮೃಡಯ ರುದ್ರ ಮಾಂ ।**
**ಶಿವಂ ಧನುರ್ಯದ್ಬಭೂವ ತೇನಾಪಿ ಮೃಡಯಾಧುನಾ ॥೪೮॥**

**ಶರವ್ಯಾ ಯಾ ಶಿವತಮಾ ತಯಾಪಿ ಮೃಡಯ ಪ್ರಭೋ ।**
**ಯಾ ತೇ ರುದ್ರ ಶಿವಾ ನಿತ್ಯಂ ಸರ್ವಮಂಗಳಸಾಧನಂ ॥೪೯॥**

**ತಯಾಭಿಚಾಕಶೀಹಿ ತ್ವಂ ತನುವಾ ಮಾಮುಮಾಪತೇ ।**
**ಅಘೋರಯಾಪಿ ತನುವಾ ರುದ್ರಾದ್ರ್ಯಾ ಪಾಪಕಾಶಿನೀ ॥೫೦॥**

---

ಚಂದ್ರಶೇಖರನಾದ ನಿನ್ನನ್ನೂ ಮತ್ತು ನಿನ್ನ ಬಾಣವನ್ನೂ ಸದಾ ನಮಸ್ಕರಿಸುವೆನು. (ನಿನ್ನ ಕೋಪವೂ ಮತ್ತು ನಿನ್ನ ಬಾಣವೂ ನನಗೆ ಯಾವ ತೊಂದರೆಯನ್ನೂ ಕೊಡದೇ ಇರಲಿ ಎಂದು ತಾತ್ಪರ್ಯ.) ॥೪೬॥

ಓ ಪಾರ್ವತೀಪತಿಯೇ, ನಿನಗೆ ನಮಸ್ಕಾರ. ನೀನು ತ್ರಿಪುರಸಂಹಾರದ ಸಮಯದಲ್ಲಿ ಮೇರುಪರ್ವತವನ್ನೇ ಧನುಸ್ಸನ್ನಾಗಿ ಉಪಯೋಗಿಸಿದೆ. ಷಡ್ಗುಣೈಶ್ವರ್ಯ ಸಂಪನ್ನನಾದ ನಿನ್ನನ್ನೂ ಮತ್ತು ನಿನ್ನ ತೋಳುಗಳನ್ನೂ ಈಗ ವಂದಿಸುವೆನು. ॥೪೭॥

ನಿನ್ನ ಕಲ್ಯಾಣದಾಯಕವೂ, ಶಾಂತತಮವೂ ಆದ ಬಾಣದಿಂದಲೂ ಮತ್ತು ಧನುಸ್ಸಿನಿಂದಲೂ ನನ್ನನ್ನು ಸುಖಿಯಾಗಿರಿಸು. ನಿನ್ನ ಭಕ್ತರ ವಿಷಯದಲ್ಲಿ ನಿನ್ನ ಧನುಸ್ಸೂ ಬಾಣವೂ ಶಾಂತವಾಗಿಯೇ ಇರಬೇಕಲ್ಲವೇ ! ॥೪೮॥

ಓ ಸ್ವಾಮಿಯೇ, ನಿನ್ನ ಬತ್ತಳಿಕೆಯು ಮಂಗಳಕರವೂ, ಶಾಂತವೂ ಆದದ್ದು. ಸಕಲ ಸೌಭಾಗ್ಯಗಳಿಗೂ ಸಾಧನವಾದ ಮತ್ತು ಆ ಹುಸಿಯಾಗದಿರುವ ಆ ಬತ್ತಳಿಕೆಯು ನನ್ನನ್ನು ಸುಖಿಯಾಗಿರಿಸಲಿ. ॥೪೯॥

ಉಮಾಪತಿಯೇ, ನೀನು ಭಕ್ತರನ್ನು ಅನುಗ್ರಹಿಸುವ ಶಕ್ತಿಯುಳ್ಳ ಅಘೋರವೆಂಬ ಹೆಸರಿನಿಂದ ಸೌಮ್ಯವಾದ ನಿನ್ನ ಶರೀರವನ್ನು ನನ್ನೆದುರಿಗೆ ವ್ಯಕ್ತ ಪಡಿಸುವವನಾಗು ( ಶಿವನಿಗೆ ಘೋರಾ ಮತ್ತು ಶಿವಾ (ಅಘೋರಾ) ಎಂಬ ಹೆಸರುಳ್ಳ ಎರಡು ಆಕಾರಗಳಿವೆ. ಅವುಗಳಲ್ಲಿ ಭಕ್ತರನ್ನು ಅನುಗ್ರಹಿಸುವ ಸಮಯ

ಯಾ ತಯಾ ಮೃಡಯ ಸ್ವಾಮಿನ್ ಸದಾ ಶಂತಮಯಾ ಪ್ರಭೋ ।
ಗಿರಿಶಂತ ಮಹಾರುದ್ರ ಹಸ್ತೇ ಯಾಮಿಷು ಮಸ್ತವೇ ॥೫೧॥

ಬಿಭರ್ಷಿ ತಾಂ ಗಿರಿತ್ರಾದ್ಯ ಶಿವಾಂ ಕುರು ಶಿವಾಪತೇ ।
ಶಿವೇನ ವಚಸಾ ರುದ್ರ ನಿತ್ಯಂ ತ್ವಾಚ್ಛಾದಯಾಮಸಿ ॥೫೨॥

ತ್ವದ್ಭಕ್ತಿಪರಿಪೂತಾಂಗಂ ಮಾ ಹಿಂಸೀಃ ಪುರುಷಂ ಜಗತ್ ।
ಯನ್ನಃ ಶರ್ವ ಜಗತ್ಸರ್ವಮಯಕ್ಷ್ಮ ಸುಮನಾಭವತ್ ॥೫೩॥

---

ದಲ್ಲಿ ಅಘೋರಾ ಎಂಬ ಆಕಾರವನ್ನು ತಾಳಿ ಸೌಮ್ಯನಾಗಿ ಕಾಣಿಸುವನೆಂದೂ, ದುಷ್ಟರನ್ನು ನಿಗ್ರಹಿಸುವಾಗ ಘೋರಾ ಎಂಬ ಆಕಾರವನ್ನು ತಾಳಿ ಭಯಂಕರನಾಗಿ ಕಾಣಿಸುವನೆಂದೂ ರುದ್ರಸೂಕ್ತದಲ್ಲಿ ಹೇಳಲ್ಪಟ್ಟಿರುತ್ತದೆ.) ("ರುದ್ರೋ ವಾ ಏಷ ಯದಗ್ನಿ ಸ್ತಸ್ಯೈತೇ ತನುವೌ ಘೋರಾನ್ಯಾ ಶಿವಾನ್ಯಾ" ಎಂಬ ಶ್ರುತಿಯಿದೆ). ||೫೦||

ಕೈಲಾಸವಾಸಿಯಾಗಿ ಸದಾ ಪ್ರಾಣಿಗಳಿಗೆ ಸೌಖ್ಯವನ್ನುಂಟುಮಾಡುವ ಸ್ವಾಮಿಯೇ, ನಿನ್ನ ಅಘೋರವೆಂಬ ಸಂಜ್ಞೆಯುಳ್ಳ ಆಕಾರದಿಂದ ನಮ್ಮನ್ನು ಅನವರತವೂ ಸುಖಿಗಳನ್ನಾಗಿರಿಸು. ಪ್ರಾಣಿಗಳಿಗೆ ಸುಖವನ್ನುಂಟುಮಾಡಲು ಕೈಲಾಸದಲ್ಲಿ ವಾಸಿಸುವ ಪರಶಿವನೇ, ನೀನು ವೈರಿಗಳನ್ನು ನಾಶಮಾಡುವುದಕ್ಕೋಸ್ಕರ ಕೈಯ್ಯಲ್ಲಿ ಧರಿಸಿದ ಆ ಬಾಣದಿಂದಲೂ ನಮಗೆ ಸೌಖ್ಯವನ್ನು ದಯಪಾಲಿಸು. ||೫೧||

ಉಮಾಕಾಂತನೇ! ಕೈಲಾಸಪರ್ವತವನ್ನು ಸಂರಕ್ಷಿಸುವ ನೀನು, ಅಭಯಪ್ರದವಾದ ಬಾಣವನ್ನು ಕೈಯ್ಯಲ್ಲಿ ಧರಿಸಿರುವೆ. ನಿನ್ನ ಸಾನ್ನಿಧ್ಯವನ್ನು ಪಡೆಯುವುದಕ್ಕೋಸ್ಕರ ನಾವು ನಿನ್ನನ್ನು ಮಂಗಳಕರವಾದ ಮತ್ತು ಸ್ತೋತ್ರರೂಪವಾದ ಮಾತುಗಳಿಂದ ಪ್ರಾರ್ಥಿಸುವೆವು. ||೫೨||

ನಿನ್ನಲ್ಲಿ ಭಕ್ತಿಯಿಟ್ಟು ಪವಿತ್ರರಾಗಿರುವ ಮನುಷ್ಯ, ಪಶು ಮುಂತಾದುವುಗಳಿಂದ ಕೂಡಿದ ಈ ಪ್ರಪಂಚವನ್ನು ಹಿಂಸೆಗೊಳಿಸಬೇಡ. ಇದಲ್ಲದೇ ಈ ಮನುಷ್ಯ ಪಶ್ವಾದಿ ಪ್ರಪಂಚವನ್ನು ರೋಗರಹಿತವಾದುದನ್ನಾಗಿಯೂ, ಪ್ರಸನ್ನವಾದ ಮನಸ್ಸುಳ್ಳದುದನ್ನಾಗಿಯೂ ಮಾಡುವವನಾಗು. ||೫೩||

ಯಥಾ ತಥಾವ ಮಾಂ ರುದ್ರ ತದನ್ಯದಪಿ ಮೇ ಪ್ರಭೋ ।
ರುದ್ರ ತ್ವಂ ಪ್ರಥಮೋ ದೈವ್ಯೋ ಭಿಷಕ್ ಪಾಪವಿನಾಶಕಃ ॥೫೪॥

ಅಧಿವಕ್ತಾಧ್ಯವೋಚನ್ಮಾ ಭವಲಿಂಗಾರ್ಚಕಂ ಮುದಾ ।
ಅಹೀನ್ ಸರ್ವಾನ್ಯಾತುಧಾನ್ಯಃ ಸರ್ವಾ ಅಪ್ಯದ್ಯ ಜಂಭಯನ್॥೫೫॥

ಅಸೌ ತಾಮ್ರೋಽರುಣೋ ಬಭ್ರುಃ ನೀಲಗ್ರೀವೋ ಸುಮಂಗಲಃ ।
ವಿಲೋಹಿತೋಽಸ್ತ್ಯಯಂ ಶಂಭೋ ತ್ವದಧಿಷ್ಠಾನಮೇವ ಹಿ ॥೫೬॥

ನಮೋ ನಮಸ್ತೇ ಭಗವನ್ನೀಲಗ್ರೀವಾಯ ಮೀಢುಷೇ ।
ಸಹಸ್ರಾಕ್ಷಾಯ ಶುದ್ಧಾಯ ಸಚ್ಚಿದಾನಂದಮೂರ್ತಯೇ ॥೫೭॥

ಅದರಂತೆಯೇ ನನ್ನನ್ನು ಸಹ ಕಾಪಾಡು. ಓ, ರುದ್ರನೇ! ನಿನ್ನ ಧ್ಯಾನ ಮಾತ್ರದಿಂದಲೇ ಸಕಲ ಜನರ ರೋಗಗಳನ್ನು ನಾಶಮಾಡುವುದರಿಂದ, ನೀನು ರೋಗಿಗಳಾದ ನಮಗೆ ಚಿಕಿತ್ಸಕನಾಗಿರುತ್ತೀಯೆ. ಇದಲ್ಲದೇ ನೀನು ದೇವತೆಗಳಲ್ಲೆಲ್ಲಾ ಮೊದಲನೆಯವನು, ಮತ್ತು ದೇವತೆಗಳ ಅಪರಾಧಗಳನ್ನು ಕ್ಷಮಿಸುವವನೂ ಆಗಿರುವೆಯಲ್ಲವೆ! ॥೫೪॥

ಓ, ರುದ್ರನೇ, ಶಿವಲಿಂಗಾರ್ಚಕನಾದ ನನಗೆ ಸರ್ವಜನರ ಮುಂಭಾಗದಲ್ಲಿ ಧೈರ್ಯದಿಂದ ಸಂಭಾಷಿಸುವ ಸಾಮರ್ಥ್ಯವನ್ನು ದಯಪಾಲಿಸಿ, ನನ್ನನ್ನು ಭಾಷಣಕಾರರಲ್ಲಿ ಅಗ್ರಗಣ್ಯನನ್ನಾಗಿ ಮಾಡು. ಅದರಿಂದಲೇ ನನ್ನನ್ನು ಸರ್ವಶ್ರೇಷ್ಠನೆಂದೆನಿಸು. ಮತ್ತು ಕ್ರೂರಜಾತಿಗೆ ಸೇರಿರುವ, ಸರ್ಪ, ವ್ಯಾಘ್ರ ಮುಂತಾದ ಪ್ರಾಣಿಗಳನ್ನೂ ರಾಕ್ಷಸರನ್ನೂ ಸಂಹರಿಸಿ, ನಮಗೆ ಅವುಗಳಿಂದುಂಟಾಗುವ ಬಾಧೆಯನ್ನು ಹೋಗಲಾಡಿಸು. ॥೫೫॥

ಮಂಗಳಸ್ವರೂಪನೂ, ವಿಷಸೇವನದಿಂದ ಕಪ್ಪಾದ ಕಂಠವುಳ್ಳವನೂ ಆದ ನೀನು ಸೂರ್ಯಮಂಡಲದ ಮಧ್ಯಭಾಗದಲ್ಲಿ ಆದಿತ್ಯಸ್ವರೂಪದಿಂದ ಜಗತ್ತನ್ನು ಬೆಳಗುತ್ತಿರುವೆ. ಆ ಆದಿತ್ಯನು ಉದಯಕಾಲದಲ್ಲಿ ಅತ್ಯಂತ ಕೆಂಪಾದ ಬಣ್ಣವುಳ್ಳವನಾಗಿಯೂ, ಪುನಃ ಅಸ್ತನಾಗುವ ವೇಳೆಯಲ್ಲಿ ರಕ್ತನಾಗಿಯೂ ಕಾಣಿಸಿಕೊಳ್ಳುವನು. ನಿನ್ನ ಅಂಶವೇ ಆ ಆದಿತ್ಯನೆಂದು ಪ್ರಸಿದ್ಧವಾಗಿರುವುದಲ್ಲವೆ! ॥೫೬॥

ನೀನು ಮೇಘರೂಪದಿಂದ ಇರುವವನಾಗಿ ವೃಷ್ಟಿಯನ್ನು ಸುರಿಸುವೆ. ಇಂದ್ರನ ರೂಪದಿಂದ ಇದ್ದು, ಸಾವಿರ ನೇತ್ರಗಳಿಂದ ಯುಕ್ತನಾಗಿರುವೆ. ಪುಣ್ಯಾಪಾಪ

**ಉಭಯೋರಾರ್ತ್ನಿಯೋರ್ಜ್ಯಾಯಾ ಧನ್ವನಸ್ತ್ವಾಂ ಪ್ರಮುಂಚತಾಂ ।**
**ಸಂಪ್ರಾಪ್ಯ ಧನುರನ್ಯೇಷಾಂ ಭಯಾಯ ಪ್ರಭವಿಷ್ಯತಿ ॥೫೮॥**

**ಅಸ್ಮದ್ಭಯವಿನಾಶಾರ್ಥಮಧುನಾ ಭಯದ ಪ್ರಭೋ ।**
**ಯಾಶ್ಚ ತೇ ಹಸ್ತ ಇಷವಃ ಪರಾ ತಾ ಭಗವೋ ವಪ ॥೫೯॥**

**ಅವತತ್ಯ ಧನುಸ್ತತ್ತ್ವಂ ಸಹಸ್ರಾಕ್ಷ ಶತೇಷುಧೇ ।**
**ಮುಖಾ ನಿಶೀರ್ಯ ಶಲ್ಯಾನಾಂ ಶಿವೋ ನಃ ಸುಮನಾ ಭವ ॥೬೦॥**

**ವಿಜ್ಯಂ ಧನುರಿದಂ ಭೂಯಾದ್ವಿಶಲ್ಯೋ ಬಾಣವಾನಪಿ ।**
**ಅನೇಶನ್ನಿಷವೋಽಪ್ಯಸ್ಯಾಪ್ಯಾಭುರಸ್ಯ ನಿಷಂಗಧಿಃ ॥೬೧॥**

---

ಗಳ ಸಂಬಂಧವಿಲ್ಲದವನೂ, ಸಚ್ಚಿದಾನಂದಸ್ವರೂಪನೂ ನೀನೇ. ಅಂತಹ ನಿನಗೆ ನಮಸ್ಕಾರ. ||೫೭||

ಪರಶಿವನೇ, ನಿನ್ನ ಧನುಸ್ಸಿನ ಎರಡು ತುದಿಗಳನ್ನು ಎಳೆದಿರುವ ಮೌರ್ವಿಯನ್ನು ಸಡಿಲವನ್ನಾಗಿ ಮಾಡು. ಹಾಗೆ ಮಾಡದಿದ್ದರೆ ಸರ್ವರೂ ನಿನ್ನ ಧನುಸ್ಸಿಗೆ ಹೆದರಿ ನಡುಗುವರು. ||೫೮||

ಭಕ್ತರಿಗೆ ಅಭಯಪ್ರದನಾದ ಸ್ವಾಮಿಯೇ, ವೈರಿಗಳಿಂದ ನಮಗೆ ಉಂಟಾಗಿರುವ ಭಯವನ್ನು ಹೋಗಲಾಡಿಸುವುದಕ್ಕೋಸ್ಕರ, ನಿನ್ನ ಕೈಯಲ್ಲಿರುವ ಬಾಣಗಳನ್ನು ಅವರ ಮೇಲೆ ಪ್ರಯೋಗಿಸುವವನಾಗು. ||೫೯||

ಇಂದ್ರರೂಪವನ್ನು ಧರಿಸಿ ಸಾವಿರ ಕಣ್ಣುಗಳಿಂದ ಕೂಡಿರುವ ಈಶ್ವರನೇ, ನೂರಾರು ಬತ್ತಳಿಕೆಗಳನ್ನು ಧರಿಸಿರುವ ರುದ್ರನೇ, ನಿನ್ನ ಧನುಸ್ಸಿನ ಮೌರ್ವಿಯನ್ನು ಬಿಚ್ಚಿ ಕೆಳಗಿರಿಸಿ, ಮೊನೆಯಾದ ಬಾಣಗಳ ಅಗ್ರಗಳನ್ನು ಬತ್ತಳಿಕೆಯ ಒಳಗಿಟ್ಟು ನಮ್ಮಲ್ಲಿ ಪ್ರಸನ್ನನಾಗು. ||೬೦||

ಸ್ವಾಮಿಯೇ, ನಿನ್ನ ಧನುಸ್ಸು ಮೌರ್ವಿಯಿಂದ ರಹಿತವಾಗಲಿ. ಮೌರ್ವಿಯನ್ನು ಕಟ್ಟಿ, ಅದನ್ನು ಸಿದ್ಧಪಡಿಸದೇ ಇರು. ನಿನ್ನ ಬಾಣಗಳು ಬತ್ತಳಿಕೆಯ ಹೊರಗೆ ಬರದೇ ಒಳಭಾಗದಲ್ಲಿಯೇ ಗುಪ್ತವಾಗಿರಲಿ. ಅವು ಬತ್ತಳಿಕೆಯ ಒಳಭಾಗದಲ್ಲಿಯೇ ಇದ್ದು, ನಮ್ಮನ್ನು ಕೊಲ್ಲಲು ಅಸಮರ್ಥವಾಗಲಿ. ಮತ್ತು ನಿನ್ನ ಆ ಬಾಣಾಸನವಾದ ಬತ್ತಳಿಕೆಯು ಬಾಣಧಾರಣೆಗೆ ಅಸಮರ್ಥವೆನಿಸಲಿ. ||೬೧||

**ಕಪರ್ದಿನೋ ಮಹೇಶಸ್ಯ ಯದಿ ನಾಭೂರ್ನಿಷಂಗಧೀಃ ।**
**ಇಷವೋಽಪಿ ಸಮರ್ಥಾಶ್ಚೇತ್ಸಾಗ್ರತ್ವೇನ ಭಯಂ ಭವೇತ್ ॥೬೨॥**

**ಯಾ ತೇ ಹೇತಿರ್ಧನುರ್ಹಸ್ತೇ ಮೀಢುಷ್ಟಮ ಬಭೂವ ಯಾ ।**
**ತಯಾಸ್ಮಾನ್ವಿಶ್ವತಸ್ತೇನ ಪಾಲಯ ತ್ವಮಯಕ್ಷ್ಮಯಾ ॥೬೩॥**

**ಅನಾತತಾಯಾಯುಧಾಯ ನಮಸ್ತೇ ಧೃಷ್ಣವೇ ನಮಃ ।**
**ಬಾಹುಭ್ಯಾಂ ಧನ್ವನೇ ಶಂಭೋ ನಮೋ ಭೂಯೋ ನಮೋ ನಮಃ ॥೬೪॥**

**ಪರಿ ತೇ ಧನ್ವನೋ ಹೇತಿರ್ವಿಶ್ವತೋಽಸ್ಮಾನ್ ವೃಣಕ್ತು ಸಃ ।**
**ಇಷುಧಿಸ್ತವ ಯಸ್ತಾವದಸ್ಮದಾರೇ ನಿಧೇಹಿ ತಂ ॥೬೫॥**

**ಹಿರಣ್ಯಬಾಹವೇ ತುಭ್ಯಂ ಸೇನಾನ್ಯೇ ತೇ ನಮೋ ನಮಃ ।**
**ದಿಶಾಂ ಚ ಪತಯೇ ತುಭ್ಯಂ ಪಶೂನಾಂ ಪತಯೇ ನಮಃ ॥೬೬॥**

---

ಜಟಾಧಾರಿಯಾದ ನಿನ್ನ ಧನುರ್ಬಾಣಗಳು ಸದಾ ಪ್ರಯೋಗಿಸಲು ಸಿದ್ಧವಾಗಿಯೇ ಇದ್ದರೂ, ಅಶಾಂತವಾಗಿದ್ದರೆಮಾತ್ರ ನಮಗೆ ಆದರಿಂದ ಭಯವುಂಟಾಗುವುದು. ॥೬೨॥

ಕಾಮಿತಾರ್ಥಪ್ರದನೇ, ನಿನ್ನ ಹಸ್ತದಲ್ಲಿರುವ ಖಡ್ಗದಿಂದಲೂ, ಧನುಸ್ಸಿನಿಂದಲೂ, ನಮ್ಮನ್ನೂ, ನಿಖಿಲ ಜಗತ್ತನ್ನೂ ರೋಗಾದ್ಯುಪದ್ರವಗಳಿಲ್ಲದಂತೆ ಸಂರಕ್ಷಿಸು. ॥೬೩॥

ಓ ರುದ್ರನೇ, ಲಕ್ಷ್ಯವನ್ನು ಭೇದಿಸಲು ಸಮರ್ಥವೂ, ಧನುಸ್ಸಿನಲ್ಲಿ ಸೇರಿಸಲಾಗದುದೂ ಆದ ನಿನ್ನ ಅನುಗ್ರಹರೂಪವಾದ ಆಯುಧಕ್ಕೆ ನಮಸ್ಕರಿಸುವೆನು. ಅಲ್ಲದೆ ಬಾಣಪ್ರಯೋಗಸಾಧಕಗಳಾದ ನಿನ್ನ ಬಾಹುಗಳಿಗೂ ವಂದಿಸುವೆನು. ॥೬೪॥

ರುದ್ರನೇ, ನಿನ್ನ ಧನುಸ್ಸೂ ಮತ್ತು ಬಾಣವು, ನಮ್ಮನ್ನೂ ನಿಖಿಲ ಜಗತ್ತನ್ನೂ ಬಾಧಿಸದಂತೆ ಮಾಡು. ಮತ್ತು ನಿನ್ನ ಧನುಸ್ಸನ್ನೂ, ಬತ್ತಳಿಕೆಯನ್ನೂ ದೂರವಾಗಿರಿಸು. ॥೬೫॥

ನಿನ್ನ ಬಾಹುಗಳು ಸುವರ್ಣಾಭರಣಗಳಿಂದ ಕೂಡಿದವುಗಳು. ನೀನು ಯುದ್ಧದಲ್ಲಿ ಸೇನಾಪತಿಯರೂಪವನ್ನು ತಾಳುವೆ. ಸಕಲ ದಿಕ್ಕುಗಳಿಗೆ ಅಧಿಪತಿಯೂ ಪಶುಪತಿಯೂ ಎನಿಸಿರುವೆ. ಇಂತಹ ನಿನಗೆ ನಮಸ್ಕಾರ. ॥೬೬॥

ತ್ವಿಷೀಮತೇ ನಮಸ್ತುಭ್ಯಂ ನಮಸ್ಸಸ್ಪಿಂಜರಾಯ ತೇ ।
ನಮಃ ಪಥೀನಾಂ ಪತಯೇ ಬಭ್ಲುಶಾಯ ನಮೋ ನಮಃ ॥೧೭॥

ನಮೋ ವಿವ್ಯಾಧಿನೇನ್ನಾನಾಂ ಪತಯೇ ಪ್ರಭವೇ ನಮಃ ।
ನಮಸ್ತೇ ಹರಿಕೇಶಾಯ ರುದ್ರಯಾಸ್ತೂಪವೀತಿನೇ ॥೧೮॥

ಪುಷ್ಟಾನಾಂ ಜಗತೇ ತುಭ್ಯಂ ಜಗತಾಂ ಪತಯೇ ನಮಃ ।
ಸಂಸಾರಹೇತಿರೂಪಾಯ ರುದ್ರಾಯಾಪ್ಯಾತತಾಯಿನೇ ॥೧೯॥

ಕ್ಷೇತ್ರಾಣಾಂ ಪತಯೇ ತುಭ್ಯಂ ಸೂತಾಯ ಸುಕೃತಾತ್ಮನೇ ।
ಅಹಂತ್ಯಾಯ ನಮಸ್ತುಭ್ಯಂ ವನಾನಾಂ ಪತಯೇ ನಮಃ ॥೨೦॥

ರೋಹಿತಾಯ ಸ್ಥಪತಯೇ ಮಂತ್ರಿಣೇ ವಾಣಿಜಾಯ ಚ ।
ಕಕ್ಷಾಣಾಂ ಪತಯೇ ತುಭ್ಯಂ ನಮಸ್ತುಭ್ಯಂ ಭುವಂತಯೇ ॥೨೧॥

---

ಸ್ವತಃ ಪ್ರಕಾಶಮಾನವಾಗಿಯೂ, ಎಳೆಯದಾದ ಹುಲ್ಲಿನಂತೆ ಹಳದಿಯ ಬಣ್ಣದಿಂದ ಮಿಶ್ರಿತವಾದ ಕೆಂಪುವರ್ಣವುಳ್ಳದ್ದಾಗಿಯೂ ಇರುವ ನಿನ್ನ ಆಕಾರಕ್ಕೆ ನಮಸ್ಕರಿಸುವೆನು. ಶಾಸ್ತ್ರೋಕ್ತವಾದ ದಕ್ಷಿಣೋತ್ತರಮಾರ್ಗಗಳಿಗೂ, ನೀನು ಅಧಿಪತಿಯಾಗಿರುವೆ. ವೃಷಭವಾಹನನೆನಿಸಿರುವೆ. ಇಂತಹ ನಿನ್ನನ್ನು ನಮಸ್ಕರಿಸುವೆನು. ||೧೭||

ವೈರಿಗಳನ್ನು ವಿಶೇಷವಾಗಿ ಸದೆಬಡಿಯುವವನೂ, ಪ್ರಾಣಿಗಳ ಆಹಾರ ರಕ್ಷಕನೂ, ವೃದ್ಧಾವಸ್ಥೆಯಲ್ಲಿಯೂ ಕಪ್ಪುಕೂದಲುಳ್ಳವನೂ (ವಾರ್ಧಕ್ಯವಿಲ್ಲದವನೂ) ಮಂಗಳಾರ್ಥವಾದ ಯಜ್ಞೋಪವೀತವನ್ನು ಧರಿಸಿದವನೂ ಆದ ನಿನಗೆ ನಮಸ್ಕಾರ. ||೧೮||

ಜಗನ್ನಾಥನಾದ ನೀನು ಸದ್ಗುಣಸಂಪನ್ನರಾದ ಪುರುಷರಿಗೆ ಅಧಿಪತಿಯಾಗಿರುವೆ. ಮತ್ತು ದುಃಖಕ್ಕೆ ಆಯುಧದಂತಿದ್ದು ಅದನ್ನು ಹೋಗಲಾಡಿಸುವೆ. ಅಂತಹ ನಿನಗೆ ನಮಸ್ಕಾರ. ||೧೯||

ಸಮಸ್ತ ಕ್ಷೇತ್ರಗಳಿಗೂ ಪತಿಯೆನಿಸಿದ ನಿನ್ನನ್ನು ವಂದಿಸುವೆನು. ಸಾರಥಿಸ್ವರೂಪನೂ, ಪರಿಶುದ್ಧಸ್ವಭಾವವುಳ್ಳವನೂ ಇತರರಿಂದ ಸಂಹರಿಸಲಶಕ್ಯನೂ ಆದ ನಿನಗೆ ಎರಗುವೆನು. ನೀನು ಅರಣ್ಯಗಳಿಗೂ ಒಡೆಯನಾಗಿರುವೆ. ||೨೦||

ರಕ್ತವರ್ಣವಿಶಿಷ್ಟನೂ, ಜಗತ್ಪ್ರಭುವೂ, ಮಂತ್ರಾಲೋಚನಕುಶಲನೂ, ವೈಶ್ಯರಿಗೆಲ್ಲಾ ಸ್ವಾಮಿಯೂ ಆದ ನಿನಗೆ ನಮಸ್ಕಾರ. ಅರಣ್ಯದಲ್ಲಿರುವ ಲತಾ

ತದ್ವಾರಿವಸ್ಕೃತಾಯಾಸ್ತು ಮಹಾದೇವಾಯ ತೇ ನಮಃ ।
ಓಷಧೀನಾಂ ಚ ಪತಯೇ ನಮಸ್ತುಭ್ಯಂ ಮಹಾತ್ಮನೇ ॥೭೨॥

ಉಚ್ಚೈರ್ಘೋಷಾಯ ಧೀರಾಯ ಧೀರಾಕ್ರಂದಯತೇ ನಮಃ ।
ಪತ್ತೀನಾಂ ಪತಯೇ ತುಭ್ಯಂ ಕೃತ್ಸ್ನವೀತಾಯ ತೇ ನಮಃ ॥೭೩॥

ಧಾವತೇ ಧವಲಾಯಾಪಿ ಸತ್ವಾನಾಂ ಪತಯೇ ನಮಃ ।
ನಮಸ್ತೇ ಸಹಮಾನಾಯ ತುಭ್ಯಂ ವಿವ್ಯಾಧಿನೇ ನಮಃ ॥೭೪॥

ಆವ್ಯಾಧಿನೀನಾಂ ಪತಯೇ ಕಕುಭಾಯ ನಿಷಂಗಿಣೇ ।
ಸೇನಾನಾಂ ಪತಯೇ ತುಭ್ಯಂ ದಿವ್ಯೇಷುಧಿಮತೇ ನಮಃ ॥೭೫॥

---

ಗುಲ್ಮಾದಿಗಳನ್ನು ಕಾಪಾಡುವವನೂ, ನೀನೇ ಆಗಿ ಸಕಲ ಭೂಮಿಪಾಲಕನೆನಿಸಿರುವೆ. ಅಂತಹ ನಿನಗೆ ನಮಸ್ಕಾರ. ॥೭೧॥

ಭಕ್ತರಿಗೆ ಧನಕನಕಾದಿಗಳನ್ನು ಅನುಗ್ರಹಿಸುವವನೂ, ಮತ್ತು ದೇವತೆಗಳ ಒಡೆಯನೂ ನೀನೇ ಆಗಿರುತ್ತೀಯೆ. ಓಷಧಿಗಳಿಗೆ ಸ್ವಾಮಿಯೆನಿಸಿ, ಎಲ್ಲೆಡೆಯಲ್ಲಿಯೂ ವಾಸವಾಗಿರುವೆ. ಅಂತಹ ನಿನ್ನನ್ನು ನಮಸ್ಕರಿಸುವೆನು. ॥೭೨॥

ಯುದ್ಧಕಾಲದಲ್ಲಿ ಸಿಂಹನಾದವನ್ನುಂಟುಮಾಡುವವನೂ, ಧೈರ್ಯಶಾಲಿಯೂ, ವೈರಿಗಳನ್ನು ಅಳುವಂತೆ ಮಾಡುವವನೂ ಆದ ನಿನಗೆ ವಂದನೆ. ಮತ್ತು ಯುದ್ಧದಲ್ಲಿ ತನ್ನ ಕಾಲಾಳುಗಳನ್ನು ತನ್ನ ಭುಜಪರಾಕ್ರಮದಿಂದ ಸಂರಕ್ಷಿಸುವವನೂ, ಶತ್ರು ಸೈನ್ಯವನ್ನು ಸುತ್ತಲೂ ಆವರಿಸಿ ನಿಲ್ಲುವವನೂ ಆದ ನಿನಗೆ ನಮಸ್ಕಾರ.॥೭೩॥

ಯುದ್ಧದಲ್ಲಿ ಸೋತು ಓಡಿಹೋಗುತ್ತಿರುವ ಶತ್ರುಗಳನ್ನು ಹಿಂಬಾಲಿಸಿ ಓಡುವವನೂ, ಶುಭ್ರವಾದ ದೇಹಕಾಂತಿಯುಳ್ಳವನೂ, ಶರಣಾಗತರನ್ನು ರಕ್ಷಿಸುವವನೂ, ವೈರಿಗಳ ಅಪರಾಧವನ್ನು ಕ್ಷಮಿಸುವವನೂ, ಕೊಬ್ಬಿದ ಶತ್ರುಗಳನ್ನು ವ್ಯಥೆಗೊಳಿಸುವವನೂ ಆದ ನಿನಗೆ ನಮಸ್ಕರಿಸುವೆನು. ॥೭೪॥

ಶೌರ್ಯದಿಂದ ಕಾದಾಡುವ ಸೇನೆಗಳನ್ನು ಸಂರಕ್ಷಿಸುವವನೂ, ಸರ್ವಪ್ರಧಾನನೂ, ಖಡ್ಗಧಾರಿಯೂ, ಸೇನಾಪತಿಯೂ, ಪವಿತ್ರವಾದ ಧನುಸ್ಸನ್ನು ಧರಿಸಿದವನೂ ಆಗಿರುವ ಶಂಕರನಿಗೆ ನಮಸ್ಕಾರ. ॥೭೫॥

ತಸ್ಕರಾಣಾಂ ಚ ಪತಯೇ ವಂಚತೇ ಪರಿವಂಚತೇ ।
ಸ್ತಾಯೂನಾಂ ಪತಯೇ ತುಭ್ಯಂ ನಮಸ್ತೇಽಸ್ತು ನಿಚೇರವೇ ॥೭೬॥

ನಮಃ ಪರಿಚರಾಯಾಪಿ ಮಹಾರುದ್ರಾಯ ತೇ ನಮಃ ।
ಆರಣ್ಯಾನಾಂ ಚ ಪತಯೇ ಮುಷ್ಣತಾಂ ಪತಯೇ ನಮಃ ॥೭೭॥

ಉಷ್ಣೀಷಿಣೇ ನಮಸ್ತುಭ್ಯಂ ನಮೋ ಗಿರಿಚರಾಯ ತೇ ।
ಕುಲುಂಚಾನಾಂ ಚ ಪತಯೇ ನಮಸ್ತೇಽಸ್ತು ಭವಾಯ ಚ ॥೭೮॥

---

ಕಳ್ಳರ ಶರೀರದಲ್ಲಿ ಈಶ್ವರರೂಪದಿಂದ ವಾಸಿಸುವವನೂ, ವಂಚನಸ್ವರೂಪನೂ ಅಪಹ್ನವ ಸ್ವರೂಪನೂ ಆದ ನಿನ್ನನ್ನು ವಂದಿಸುವೆನು. ಪರಿಚಿತರಾಗಿ ಚೌರ್ಯವೃತ್ತಿಯನ್ನು ಅವಲಂಬಿಸಿರುವ ಕಳ್ಳರಿಗೆ ನೀನು ಅಧಿಪತಿಯಾಗಿರುವೆ. ಮತ್ತು ದಿವ್ಯವಾದ ಬತ್ತಳಿಕೆಯನ್ನು ಧರಿಸಿರುವೆ. ಅಂತಹ ನಿನಗೆ ನಮಸ್ಕಾರ. ॥೭೬॥

(ಟಿಪ್ಪಣಿ—ಯಜಮಾನನಿಗೆ ಭಕ್ತನಾಗಿದ್ದು ಆತನ ಕ್ರಯವಿಕ್ರಯಾದಿ ವ್ಯವಹಾರಗಳಲ್ಲಿ ದ್ರವ್ಯವನ್ನು ಅಪಹರಿಸುವವನು ವಂಚಕನು. ಎಲ್ಲ ಕಾರ್ಯಗಳಲ್ಲಿಯೂ ಮೋಸಮಾಡುವವನು ಪರಿವಂಚಕನು. ರಾತ್ರಿಯಲ್ಲಿ ಯಜಮಾನನಿಗೆ ತಿಳಿಯದಂತೆ ದ್ರವ್ಯವನ್ನು ಕದಿಯುವವನು ಸ್ತೇನನು. ಸ್ವಕೀಯನಾಗಿದ್ದು, ರಾತ್ರಿಯಲ್ಲಿಯೋ, ಹಗಲಿನಲ್ಲಿಯೋ ತಿಳಿಯದಂತೆ ಯಜಮಾನನ ಸ್ವತ್ತನ್ನು ಅಪಹರಿಸುವವನು ಸ್ತಾಯುವು.)

ರುದ್ರನೇ, ಚೌರ್ಯಬುದ್ಧಿಯಿಂದ ಅಂಗಡಿಬೀದಿಗಳಲ್ಲಿ ಸಂಚರಿಸುವ ಕಳ್ಳನ ಸ್ವರೂಪನೂ ನೀನೇ ಆಗಿರುವೆ. ಮತ್ತು ಪ್ರಲಯಕಾಲದಲ್ಲಿ ಸಕಲ ಚರಾಚರಗಳನ್ನು ನಾಶಮಾಡುವವನೂ ನೀನೇ. ಅರಣ್ಯದಲ್ಲಿ ವಾಸವಾಗಿದ್ದು ಪ್ರಯಾಣಿಕರ ದ್ರವ್ಯವನ್ನು ಅಪಹರಿಸುವ ಸ್ವಭಾವವುಳ್ಳ ಕಳ್ಳರಿಗೂ ಮತ್ತು ಕೃಷಿವೃತ್ತಿಯನ್ನು ಅವಲಂಬಿಸಿ ತನ್ನ ಒಡೆಯನ ಧನಧಾನ್ಯಾದಿಗಳನ್ನು ಅಪಹರಿಸುವ ಕಳ್ಳರಿಗೂ ಅಧಿಪತಿಯೆನಿಸಿರುವೆ. ಅಂತಹ ನಿನ್ನನ್ನು ವಂದಿಸುವೆನು. ॥೭೭॥

ಉಷ್ಣೀಷೀ ಎಂದರೆ, ಹಳ್ಳಿಗಾಡಿನ ಜನರಂತೆ, ತಲೆಗೆ ಬಟ್ಟೆಯನ್ನು ಸುತ್ತಿಕೊಂಡು ಅವರ ನಡುವೆಯೇ ಸಂಚರಿಸುತ್ತಿರುವ ಕಳ್ಳನು. ಗಿರಿಚರ, ಎಂದರೆ, ಪರ್ವತದಲ್ಲಿ ಸಂಚರಿಸುವ ಕಳ್ಳನು ಎಂದರ್ಥ. ಕುಲುಂಚ ಎಂದರೆ, ಗೃಹ, ಕ್ಷೇತ್ರ ಮುಂತಾದುವುಗಳನ್ನು ಅಪಹರಿಸುವ ಕಳ್ಳನು ಎಂದರ್ಥ. ಶಂಕರನು ಈ

ನಮೋ ರುದ್ರಾಯ ಶರ್ವಾಯ ತುಭ್ಯಂ ಪಶುಪತೇ(?)ನಮಃ ।
ನಮ ಉಗ್ರಾಯ ಭೀಮಾಯ ನಮ ಅಗ್ರೇವಧಾಯ ಚ ॥೭೯॥

ನಮೋ ದೂರೇವಧಾಯಾಪಿ ನಮೋ ಹಂತ್ರೇ ನಮೋ ನಮಃ ।
ಹನೀಯಸೇ ನಮಸ್ತುಭ್ಯಂ ನೀಲಗ್ರೀವಾಯ ತೇ ನಮಃ ॥೮೦॥

ನಮಸ್ತೇ ಶಿತಿಕಂಠಾಯ ನಮಸ್ತೇಽಸ್ತು ಕಪರ್ದಿನೇ ।
ನಮಸ್ತೇ ವ್ಯುಪ್ತಕೇಶಾಯ ಸಹಸ್ರಾಕ್ಷಾಯ ಮೀಢುಷೇ ॥೮೧॥

ಗಿರಿಶಾಯ ನಮಸ್ತೇಽಸ್ತು ಶಿಪಿವಿಷ್ಟಾಯ ತೇ ನಮಃ ।
ನಮಸ್ತೇ ಶಂಭವೇ ತುಭ್ಯಂ ಮಯೋಭವ ನಮೋಽಸ್ತು ತೇ ॥೮೨॥

---

ಕಳ್ಳರಿಗೆ ಯಜಮಾನರೂಪಿಯಾಗಿಯೂ ತೋರುವವನು. ಸರ್ವವ್ಯಾಪಕನಾದ ಅಂತಹ ದೇವನನ್ನು ನಮಸ್ಕರಿಸುವೆನು. ||೭೮||

ರುದ್ರ ಎಂದರೆ, ದುಃಖವನ್ನು ಹೋಗಲಾಡಿಸುವವನು. ಶರ್ವಃ ಪಾಪನಾಶಕನು, ಪಶುಪತಿಃ-ಪಶುಗಳಂತೆ ಅಜ್ಞರಾಗಿರುವ ಮನುಷ್ಯರನ್ನು ರಕ್ಷಿಸುವವನು. ಉಗ್ರಃ-ವೈರಿಗಳನ್ನು ಸಂಹರಿಸುವಾಗ ಕ್ರೋಧಾವಿಷ್ಟನಾಗಿರುವವನು. ಭೀಮಃ-ದರ್ಶನಮಾತ್ರದಿಂದಲೇ ಭಯಂಕರನು. ಅಗ್ರೇವಧಃ-ಕಪಟವೃತ್ತಿಯನ್ನನುಸರಿಸದೇ ಶತ್ರುಗಳನ್ನು ಎದುರಿಗೇ ಸಂಹರಿಸುವವನು. ಅಂತಹವನಿಗೆ ನಮಸ್ಕಾರ. ||೭೯||

ದೂರೇವಧಃ–ದೂರದಿಂದಲೇ ಶತ್ರುಗಳನ್ನು ಸಂಹರಿಸುವವನು. ಹಂತಾ–ಶತ್ರುಸಂಹಾರಕನು, ಹನೀಯಾನ್–ನಾಮಾವಶೇಷವಾಗಿ ಸಂಹರಿಸುವವನು. ನೀಲಗ್ರೀವಃ-ವಿಷಪಾನದಿಂದ ಕಪ್ಪಾದ ಕಂಠವುಳ್ಳವನು. ಇಂತಹ ನಿನಗೆ ನಮಸ್ಕರಿಸುವೆನು ||೮೦||

ಶಿತಿಕಂಠಃ–ಕತ್ತಿನ ಒಂದು ಭಾಗದಲ್ಲಿ ಬಿಳಿಯ ಬಣ್ಣದಿಂದ ಕೂಡಿರುವವನು. ಕಪರ್ದೀ–ಜಟಾಧಾರಿಯು, ವ್ಯುಪ್ತಕೇಶಃ–ಶಿರಸ್ಸಿನಲ್ಲಿ ಕೂದಲಿಲ್ಲದವನು. (ಎಂದರೆ ಯತಿ ವೇಷಧಾರಿ ಎಂದರ್ಥ.) ಸಹಸ್ರಾಕ್ಷಃ-ಇಂದ್ರರೂಪದಿಂದಿರುವವನು. ಅಂತಹ ನಿನಗೆ ನಮಸ್ಕಾರ. ||೮೧||

ಗಿರಿಶಃ-ಕೈಲಾಸವಾಸಿಯು, ಶಿಪಿವಿಷ್ಟಃ-ಕಿರಣರೂಪದಲ್ಲಿ ವ್ಯಾಪಿಸುವವನು. ಶಂಭುಃ–ಸುಖಕರನು, ಮಯೋಭವಃ–ಸುಖವನ್ನು ಅನುಗ್ರಹಿಸುವವನು. ||೮೨||

**ಮಯಸ್ಕರ ನಮಸ್ತುಭ್ಯಂ ಶಂಕರಾಯ ನಮೋನಮಃ ।**
**ನಮಃ ಶಿವಾಯ ಶರ್ವಾಯ ನಮಃ ಶಿವತರಾಯ ಚ ॥೮೩॥**

**ನಮಸ್ತೀರ್ಥ್ಯಾಯ ಕೂಲ್ಯಾಯ ನಮಃ ಪಾರ್ಯಾಯ ತೇ ನಮಃ ।**
**ಅವಾರ್ಯಾಯ ನಮಸ್ತೇಽಸ್ತು ನಮಃ ಪ್ರತರಣಾಯ ಚ ॥೮೪॥**

**ನಮ ಉತ್ತರಣಾಯಾಪಿ ಹರಾಯಾತಾರ್ಯ ತೇ ನಮಃ ।**
**ಆಲಾದ್ಯಾಯ ನಮಸ್ತೇಽಸ್ತು ಭಕ್ತಾನಾಂ ವರದಾಯ ಚ ॥೮೫॥**

**ನಮಃ ಶಷ್ಪ್ಯಾಯ ಫೇನ್ಯಾಯ ಸಿಕತ್ಯಾಯ ನಮೋ ನಮಃ ।**
**ಪ್ರವಾಹ್ಯಾಯ ನಮಸ್ತೇಽಸ್ತು ಹ್ರಸ್ವಾಯಾಸ್ತು ನಮೋನಮಃ ॥೮೬॥**

---

ಮಯಸ್ಕರಃ–ಆಚಾರ್ಯರೂಪದಿಂದ ಇದ್ದು ಶಿಷ್ಯನಿಗೆ ಮೋಕ್ಷಸುಖವನ್ನುಂಟು ಮಾಡುವವನು, ಶಂಕರಃ–ಸುಖಕರನು, ಶಿವಃ–ಕಲ್ಯಾಣಕರನು, ಶಿವಕರಃ–ಅತ್ಯಂತ ಶ್ರೇಷ್ಠನು ಆದ ನಿನ್ನನ್ನು ನಮಸ್ಕರಿಸುವೆನು. ॥೮೩॥

ತೀರ್ಥ್ಯಃ-ಪ್ರಯಾಗಾದಿಕ್ಷೇತ್ರಗಳಲ್ಲಿ ನೆಲಸಿರುವವನು. ಕುಲ್ಯಃ–ನದೀತೀರಗಳಲ್ಲಿ ಲಿಂಗರೂಪದಿಂದ ನೆಲಸಿರುವವನು. ಪಾರ್ಯಃ–ಸಂಸಾರಸಮುದ್ರದ ಪರತೀರವಾದ ಮೋಕ್ಷವನ್ನು ಹೊಂದುವುದಕ್ಕೋಸ್ಕರ, ಮುಮುಕ್ಷುಗಳಿಂದ ಧ್ಯಾನಿಸಲ್ಪಡುವವನು, ಅವಾರ್ಯಃ ಸಂಸಾರಿಗಳಿಗೆ ಕಾಮ್ಯವಾದ ಸ್ವರ್ಗಾದಿಗಳನ್ನು ಕೊಡುವವನು, ಪ್ರತರಣಃ–ಮಂತ್ರಜಪಾದಿರೂಪದಿಂದಿದ್ದು, ಜಪಿಸುವವರ ಪಾಪಗಳನ್ನು ನಾಶಮಾಡುವವನು, ಅಂತಹ ನಿನಗೆ ನಮಸ್ಕಾರ. ॥೮೪॥

ಉತ್ತರಣಃ–ಸಂಸಾರದಿಂದ ಬಿಡುಗಡೆಯನ್ನುಂಟುಮಾಡುವವನು, ಹರ-ಪಾಪನಾಶಕನೂ, ಆತಾರ್ಯಃ–ಸಂಸಾರ ಪಾಶವನ್ನು ಹೋಗಲಾಡಿಸುವ ತತ್ತ್ವಜ್ಞಾನವಿದ್ದರೂ ಅದನ್ನು ಅಪೇಕ್ಷಿಸಿ ಪುನಃ ಪುನಃ ಸಂಸಾರವನ್ನೇ ಪಡೆಯುವ ಜೀವಿಗಳ ದೇಹದಲ್ಲಿ ಈಶ್ವರರೂಪದಿಂದ ಇರುವವನು. ಆಲಾದ್ಯಃ–ಜೀವನನ್ನು ಆಯಾ ಕರ್ಮಫಲಗಳ ಭೋಗಗಳಲ್ಲಿ ಪ್ರೇರಿಸುವವನು. ಮತ್ತು ಭಕ್ತರಿಗೆ ಇಷ್ಟಾರ್ಥಗಳನ್ನು ಕೊಡುವವನೂ ಆದ ನಿನ್ನನ್ನು ನಮಸ್ಕರಿಸುವೆನು. ॥೮೫॥

ಶಷ್ಪ್ಯಃ–ಗಂಗಾದಿನದೀತೀರದಲ್ಲಿ ಎಳೆಯ ಹುಲ್ಲಿನ ರೂಪದಿಂದ ಇರುವವನು. ಫೇನ್ಯಃ–ನದೀನೀರಿನಿಂದ ನೊರೆಯರೂಪದಲ್ಲಿರುವವನು. ಸಿಕತ್ಯಃ-ಮರಳಿನ ರೂಪದಲ್ಲಿರುವವನು. ಪ್ರವಾಹ್ಯಃ–ಪ್ರವಾಹರೂಪದಲ್ಲಿರುವವನು. ಹ್ರಸ್ವಃ-ಶರೀರದಲ್ಲಿ

ವಾಮನಾಯ ನಮಸ್ತೇಽಸ್ತು ನಮೋಽಸ್ತು ಬೃಹತೇ ನಮಃ ।
ವರ್ಷೀಯಸೇ ನಮಸ್ತೇಽಸ್ತು ನಮೋ ವೃದ್ಧಾಯ ತೇ ನಮಃ ॥೮೭॥

ಸಂವೃಧ್ವನೇ ನಮಸ್ತುಭ್ಯಮಗ್ರಿಯಾಯ ನಮೋ ನಮಃ ।
ಪ್ರಥಮಾಯ ನಮಸ್ತುಭ್ಯಮಾಶವೇ ಚಾಜಿರಾಯ ಚ ॥೮೮॥

ಶೀಘ್ರ್ಯಾಯ ನಮಸ್ತುಭ್ಯಂ ಶೀಭ್ಯಾಯ ಚ ನಮೋ ನಮಃ ।
ನಮ ಊರ್ಮ್ಯಾಯ ಸೂರ್ಮ್ಯಾಯಾಪ್ಯವಸ್ವನ್ಯಾಯ ತೇ ನಮಃ ॥೮೯॥

ಸ್ರೋತಸ್ಯಾಯ ನಮಸ್ತುಭ್ಯಂ ದ್ವೀಪ್ಯಾಯ ಚ ನಮೋ ನಮಃ ।
ಜ್ಯೇಷ್ಠಾಯ ಚ ನಮಸ್ತುಭ್ಯಂ ಕನಿಷ್ಠಾಯ ಚ ತೇ ನಮಃ ॥೯೦॥

---

ಹೆಬ್ಬೆರಳಿನ ಗಾತ್ರವಾಗಿರುವ ಹೃದಯಾಕಾಶದಲ್ಲಿ ನೆಲಸಿರುವವನೂ ಆದ ನಿನಗೆ ನಮಸ್ಕಾರ. ||೮೬||

ವಾಮನಃ -ಅಲ್ಪಪ್ರಮಾಣದಿಂದಿರುವವನು, ಬೃಹತ್–ಮಹದಾಕಾರವನ್ನು ತಾಳಿರುವವನು. ವರ್ಷೀಯಾನ್–ಗುಣವೃದ್ಧನು, ವೃದ್ಧಃ–ವಯಸ್ಸಿನಿಂದ ವೃದ್ಧನು ನೀನೇ ಆಗಿರುವೆ. ಅಂತಹ ನಿನಗೆ ವಂದನೆಗಳು. ||೮೭||

ಸಂವೃಧ್ವಾ–ವೇದಾಂತವೇದ್ಯನು, ಅಗ್ರಿಯಃ–ಜಗದುತ್ಪತ್ತಿಗಿಂತಲೂ ಪೂರ್ವದಲ್ಲಿಯೇ ಇರುವವನು, ಪ್ರಥಮಃ–ಸಭಾಪತಿಯು, ಆಶು–ಪ್ರಾಣನಾಶಕನು, ಅಜಿರಃ-ಗಮನದಲ್ಲಿ ಕುಶಲನು ಆದ ನಿನ್ನನ್ನು ವಂದಿಸುವೆನು. ||೮೮||

ಶೀಘ್ರ್ಯಃ--ಶೀಘ್ರವಾಗಿ ಸಂಚರಿಸುವವನು, ಶೀಭ್ಯಃ–ನೀರಿನ ಪ್ರವಾಹದಲ್ಲಿ ಇರುವವನು, ಊರ್ಮ್ಯಃ=ಪೃಥಿವಿಯಲ್ಲಿ ನೆಲಸಿರುವವನು, ಸೂರ್ಮ್ಯಃ–ನದಿಯಲ್ಲಿ ನೆಲಸಿರುವವನು, ಅವಸ್ವನ್ಯಃ--ನಿಶ್ಚಲವಾದ ನೀರಿನಲ್ಲಿ ನೆಲಸಿರುವವನು.||೮೯||

ಸ್ರೋತಸ್ಯಃ–ಪ್ರವಾಹದಲ್ಲಿ ನೆಲಸಿರುವವನು, ದ್ವೀಪ್ಯಃ-ದ್ವೀಪದಲ್ಲಿ ಇರುವವನು, ಜ್ಯೇಷ್ಠಃ–ವಿದ್ಯೆ ಮತ್ತು ಐಶ್ವರ್ಯಗಳಿಂದ ಸರ್ವರನ್ನೂ ಮೀರಿರುವವನು. ಕನಿಷ್ಠಃ-ವಿದ್ಯಾವಿಹೀನನು. ಆದ ನಿನಗೆ ವಂದನೆಗಳು. ||೯೦||

ಪೂರ್ವಜಾಯ ನಮಸ್ತುಭ್ಯಂ ನಮೋಽಸ್ತ್ವಪರಜಾಯ ಚ ।
ಮಧ್ಯಮಾಯ ನಮಸ್ತುಭ್ಯಮಪಗಲ್ಭಾಯ ತೇ ನಮಃ ॥೯೧॥

ಜಘನ್ಯಾಯ ನಮಸ್ತುಭ್ಯಂ ಬುಧ್ನಿಯಾಯ ನಮೋ ನಮಃ ।
ಸೋಭ್ಯಾಯ ಪ್ರತಿಸರ್ಯಾಯ ಯಾಮ್ಯಾಯ ಚ ನಮೋ ನಮಃ ॥೯೨॥

ಕ್ಷೇಮ್ಯಾಯ ಚ ನಮಸ್ತುಭ್ಯಂ ಯಾಮ್ಯಾಯ ಚ ನಮೋ ನಮಃ ।
ಉರ್ವರ್ಯಾಯ ನಮಸ್ತುಭ್ಯಂ ಖಲ್ಯಾಯ ಚ ನಮೋ ನಮಃ ॥೯೩॥

ಶ್ಲೋಕ್ಯಾಯ ಚಾವಸಾನ್ಯಾಯಾವಸ್ವನ್ಯಾಯ ಚ ತೇ ನಮಃ ।
ನಮೋ ವನ್ಯಾಯ ಕಕ್ಷ್ಯಾಯ ಮೌಂಜ್ಯಾಯ ಚ ನಮೋ ನಮಃ ॥೯೪॥

---

ಪೂರ್ವಜಃ–ಜಗತ್ತಿನ ಉತ್ಪತ್ತಿಗಿಂತಲೂ ಮೊದಲು ಹಿರಣ್ಯಗರ್ಭನ ರೂಪದಿಂದ ಇರುವವನು, ಅಪರಜಃ–ಜಗತ್ತಿನ ಪ್ರಲಯಕಾಲದಲ್ಲಿ ಕಾಲಾಗ್ನಿರೂಪವನ್ನು ತಾಳುವವನು, ಮಧ್ಯಮಃ–ಜಗತ್ತಿನ ಸ್ಥಿತಿಕಾಲದಲ್ಲಿ ದೇವತಿರ್ಯಗಾದಿ ಪ್ರಾಣಿಗಳ ರೂಪದಿಂದ ಇರುವವನು, ಅಪ್ರಗಲ್ಭಃ–ಬಾಲಕನು, ಈ ಎಲ್ಲಾ ರೂಪನೂ ನೀನೇ ಆಗಿರುವೆ. ಅಂಥ ನಿನ್ನನ್ನು ವಂದಿಸುವೆನು. ॥೯೧॥

ಜಘನ್ಯಃ–ಗೋವು ಮುಂತಾದ ಪ್ರಾಣಿಗಳ ಹಿಂಭಾಗದಿಂದ ಕರುವಿನ ರೂಪದಲ್ಲಿ ಜನಿಸುವವನು, ಬುಧ್ನಿಯಃ–ವೃಕ್ಷಗಳಲ್ಲಿ ಕೊಂಬೆಗಳ ರೂಪದಿಂದ ಆವಿರ್ಭವಿಸುವವನು, ಸೋಭ್ಯಃ–ಪುಣ್ಯಪಾಪಗಳಿಂದ ಉತ್ಪನ್ನವಾದ ಈ ಮನುಷ್ಯ ಲೋಕಸ್ವರೂಪನು, ಪ್ರತಿಸರ್ಯಃ=ವಿವಾಹಾದಿ ಶುಭಕರ್ಮಗಳಲ್ಲಿ ಕೈಗೆ ಕಂಕಣವನ್ನು ಧರಿಸುವವನು, ಯಾಮ್ಯಃ–ಯಮಲೋಕದಲ್ಲಿ ಪಾಪಿಗಳನ್ನು ಶಿಕ್ಷಿಸುವವನು. ॥೯೨॥

ಕ್ಷೇಮ್ಯಃ–ಮೋಕ್ಷಸುಖವನ್ನು ಹೊಂದಿರುವವನು, ಉರ್ವರ್ಯಃ–ಸಸ್ಯಾದಿಗಳಲ್ಲಿ ಧಾನ್ಯರೂಪದಿಂದ ಹುಟ್ಟುವವನು, ಖಲ್ಯಃ–ಧಾನ್ಯವನ್ನು ಚೊಕ್ಕಟವಾಗಿ ಮಾಡುವ ಕಣ, ಮೇಟಿ ಮುಂತಾದ ವಸ್ತುರೂಪದಲ್ಲಿರುವವನು. ॥೯೩॥

ಶ್ಲೋಕ್ಯಃ–ವೈದಿಕಮಂತ್ರಗಳಿಂದ ಪ್ರತಿಪಾದಿಸಲ್ಪಡುವವನು, ಅವಸಾನ್ಯಃ–ವೇದಾಂತವೇದ್ಯನು, ವನ್ಯಃ–ಅರಣ್ಯದಲ್ಲಿ ಮರಗಿಡಗಳ ರೂಪದಿಂದ ಜನಿಸುವವನು, ಕಕ್ಷ್ಯಃ–ಬಳ್ಳಿ, ಗುಲ್ಮ ಮುಂತಾದುವುಗಳ ರೂಪದಿಂದ ಜನಿಸುವವನು, ಮೌಂಜ್ಯಃ–ಮುಂಜತೃಣ ನಿರ್ಮಿತವಾದ ಮೌಂಜಿಯಂತೆ ಪ್ರತಿಫಲಿಸುವವನು. ॥೯೪॥

ಶ್ರವಾಯ ಚ ನಮಸ್ತುಭ್ಯಂ ಪ್ರತಿಶ್ರವ ನಮೋ ನಮಃ ।
ಆಶುಷೇಣಾಯ ಶೂರಾಯ ನಮೋಽಸ್ತ್ವಾಶುರಥಾಯ ಚ ॥೯೫॥

ವರೂಥಿನೇ ವರ್ಮಿಣೇ ಚ ಬಿಲ್ಮಿನೇ ಚ ನಮೋ ನಮಃ ।
ಪ್ರಹಿತಾಯ ನಮಸ್ತುಭ್ಯಂ ಧೃಷ್ಣವೇ ಪ್ರಹಿತಾಯ ಚ ॥೯೬॥

ಪಾರಾಯ ಪಾರವಿಂದಾಯ ನಮಸ್ತೀಕ್ಷ್ಣೇಷವೇ ನಮಃ ।
ಸುಧನ್ವನೇ ನಮಸ್ತುಭ್ಯಂ ಸ್ವಾಯುಧಾಯ ನಮೋ ನಮಃ ॥೯೭॥

ನಮಃ ಶ್ರುತ್ಯಾಯ ಪಥ್ಯಾಯ ನಮಃ ಕಾಟ್ಯಾಯ ತೇ ನಮಃ ।
ನಮೋ ನೀಪ್ಯಾಯ ಸೂದ್ಯಾಯ ಸರಸ್ಯಾಯ ಚ ತೇ ನಮಃ ॥೯೮॥

---

ಶ್ರವಃ -ಶಬ್ದಸ್ವರೂಪನು, ಪ್ರತಿಶ್ರವಃ–ಪ್ರತಿಧ್ವನಿಸ್ವರೂಪನು, ಆಶುಷೇಣಃ – ಶೀಘ್ರವಾಗಿ ಸಂಚರಿಸುವ ಸೇನೆಯುಳ್ಳವನು, ಆಶುರಥಃ–ಶೀಘ್ರವಾಗಿ ಸಂಚರಿಸುವ ರಥದಿಂದ ಕೂಡಿದವನು. ||೯೫||

ವರೂಥೀ–ಗೃಹಸ್ಥನು, ವರ್ಮೀ–ಕಂಚುಕವನ್ನು ಧರಿಸಿರುವವನು, ಪ್ರಹಿತಃ– ಸ್ವಾಮಿಯಿಂದ ಕಳುಹಿಸಲ್ಪಟ್ಟ ಭೃತ್ಯಸ್ವರೂಪನು, ಧೃಷ್ಣುಃ–ಯುದ್ಧದಲ್ಲಿ ಹೆದರಿ ಓಡದೇ ಇರುವವನು. ||೯೬||

ಪಾರಃ–ನದಿಯ ದಡಗಳ ರೂಪದಲ್ಲಿರುವವನು, ಪಾರವಿಂದಃ -ಸಂಸಾರ ಸಾಗರದ ಪಾರವನ್ನು ಕಂಡವನು, ತೀಕ್ಷ್ಣೇಷುಃ-ಹರಿತವಾದ ಬಾಣವುಳ್ಳವನು, ಸುಧನ್ವಾ–ಮನೋಹರವಾದ ಧನುಸ್ಸನ್ನು ಧರಿಸಿದವನು, ಸ್ವಾಯುಧಃ–ಸುಂದರವಾದ ಖಡ್ಗವನ್ನು ಧರಿಸಿದವನು. ||೯೭||

ಶ್ರುತ್ಯಃ--ಚಿಕ್ಕ ಚಿಕ್ಕ ಮಾರ್ಗಗಳ ಸ್ವರೂಪನು, ಪಥ್ಯಃ–ರಥಾಶ್ವಾದಿಗಳು ಸಂಚರಿಸಲು ಯೋಗ್ಯವಾದ ಮಾರ್ಗಸ್ವರೂಪನು, ಕಾಟ್ಯಃ-ಸರೋವರದಲ್ಲಿ ನೀರಿನ ರೂಪದಿಂದ ನೆಲಸಿರುವವನು, ನೀಪ್ಯಃ-ಪರ್ವತಗಳ ನಿಮ್ನಪ್ರದೇಶದಲ್ಲಿ ನೀರಿನ ರೂಪದಿಂದ ಕೆಳಗೆ ಹರಿಯುವವನು, ಸೂದ್ಯಃ–ಕೆಸರಿನ ಪ್ರದೇಶದಲ್ಲಿ ಜಲರೂಪದಿಂದಿರುವವನು, ಸರಸ್ಯಃ–ಸರೋವರದಲ್ಲಿ ಜಲರೂಪದಿಂದಿರುವವನು. ||೯೮||

ನಮೋ ನಾದ್ಯಾಯ ಭವ್ಯಾಯ ವೈಶಂತಾಯ ಚ ತೇ ನಮಃ ।
ಅವಟ್ಯಾಯ ನಮಸ್ತುಭ್ಯಂ ನಮಃ ಕೂಪ್ಯಾಯ ತೇ ನಮಃ ॥೧೦೦॥

ಅವರ್ಷ್ಯಾಯ ಚ ವರ್ಷ್ಯಾಯ ಮೇಘ್ಯಾಯ ಚ ನಮೋ ನಮಃ ।
ವಿದ್ಯುತ್ಯಾಯ ನಮಸ್ತುಭ್ಯಮೀಧ್ರಿಯಾಯ ನಮೋ ನಮಃ ॥೧೦೧॥

ಆತಪ್ಯಾಯ ನಮಸ್ತುಭ್ಯಂ ವಾತ್ಯಾಯ ಚ ನಮೋ ನಮಃ ।
ರೇಷ್ಮ್ಯಾಯ ಚ ನಮಸ್ತುಭ್ಯಂ ವಾಸ್ತವ್ಯಾಯ ಚ ತೇ ನಮಃ ॥೧೦೨॥

ವಾಸ್ತುಪಾಯ ನಮಸ್ತೇಽಸ್ತು ನಮಃ ಸೋಮಾಯ ತೇ ನಮಃ ।
ನಮೋ ರುದ್ರಾಯ ತಾಮ್ರಾಯಾಪ್ಯರುಣಾಯ ಚ ತೇ ನಮಃ ॥೧೦೩॥

---

ನಾದ್ಯಃ—ನದಿಯಲ್ಲಿ ನೀರಿನರೂಪದಿಂದಿರುವವನು. ಭವ್ಯಃ—ಸಂಸಾರಿಯಾಗಿರುವವನು. ವೈಶಂತಃ–ಕ್ಷುದ್ರವಾದ ಪ್ರದೇಶಗಳಲ್ಲಿ ಜಲರೂಪದಿಂದಿರುವವನು. ಅವಟ್ಯಃ—ಹಳ್ಳದಲ್ಲಿ ಜಲರೂಪದಿಂದಿರುವವನು, ಕೂಪ್ಯಃ–ಬಾವಿಯ ನೀರಿನ ರೂಪದಿಂದಿರುವವನು. ॥೧೦೦॥

ವರ್ಷ್ಯಃ—ವರ್ಷಾಕಾಲದ ನೀರಿನರೂಪದಿಂದಿರುವವನು. ಅವರ್ಷ್ಯಃ—ಸಮುದ್ರಾದಿಗಳಲ್ಲಿ ನೀರಿನರೂಪದಿಂದಿರುವವನು. ಮೇಘ್ಯಃ- ಮೇಘದಲ್ಲಿರುವವನು. ವಿದ್ಯುತ್ಯಃ ಮಿಂಚಿನಲ್ಲಿ ನೀರಿನ ಅಂಶದಿಂದ ನೆಲಸಿರುವವನು. ಈಧ್ರಿಯಃ–ಶರತ್ಕಾಲದ ಮೇಘದಲ್ಲಿ ನೆಲಸಿರುವವನು. ॥೧೦೧॥

ಆತಪ್ಯಃ–ಬಿಸಿಲುಮಳೆಯಲ್ಲಿ ಜಲರೂಪದಿಂದ ಕೆಳಕ್ಕೆ ಬೀಳುವವನು ವಾತ್ಯಃ–ಗಾಳಿಯು ಬೀಸುತ್ತಿರಲು, ಮಳೆಯರೂಪದಿಂದ ಕೆಳಕ್ಕೆ ಬೀಳುವವನು. ರೇಷ್ಮ್ಯಃ–ಪ್ರಲಯಕಾಲದಲ್ಲಿ, ಕಲ್ಲುಮಣ್ಣುಗಳಿಂದ ಕೂಡಿ ಕೆಳಕ್ಕೆ ಸುರಿಯುವ ಮಳೆಯ ಸ್ವರೂಪನು. ವಾಸ್ತವ್ಯಃ–ಧನಕನಕಾದಿ ಪದಾರ್ಥಗಳಲ್ಲಿ ಆಯಾ ಕಾರ್ಯಗಳ ರೂಪದಿಂದ ವಾಸಿಸುವವನು. ॥೧೦೨॥

ವಾಸ್ತುಪಃ–ಗೃಹನಿರ್ಮಾಣಕ್ಕೋಸ್ಕರ, ಇರುವ ಭೂಮಿಯನ್ನು ಕಾಪಾಡುವವನು. ಸೋಮಃ–ಉಮಾದೇವಿಯಿಂದ ಕೂಡಿರುವವನು. ರುದ್ರಃ–ದುಃಖನಾಶಕನು. ತಾಮ್ರಃ–ಸೂರ್ಯನರೂಪದಿಂದಿದ್ದು ಉದಯಕಾಲದಲ್ಲಿ ಅತ್ಯಂತ ರಕ್ತವರ್ಣವುಳ್ಳವನು. ಅರುಣಃ–ಉದಯಕಾಲವಾದ ಬಳಿಕ ಸ್ವಲ್ಪ ಕೆಂಪಾಗಿರುವವನು. ॥೧೦೩॥

**ನಮ ಉಗ್ರಾಯ ಭೀಮಾಯ ನಮಃ ಶಂಗಾಯ ತೇ ನಮಃ ।**
**ನಮಸ್ತೀರ್ಥ್ಯಾಯ ಕೂಲ್ಯಾಯ ಸಿಕತ್ಯಾಯ ಚ ತೇ ನಮಃ ॥೧೦೪॥**

**ಪ್ರವಾಹ್ಯಾಯ ನಮಸ್ತುಭ್ಯಮಿರಿಣ್ಯಾಯ ಚ ತೇ ನಮಃ ।**
**ನಮಸ್ತೇ ಚಂದ್ರಚೂಡಾಯ ಪ್ರಪಥ್ಯಾಯ ಚ ತೇ ನಮಃ ॥೧೦೫॥**

**ಕಿಂಶಿಲಾಯ ನಮಸ್ತೇಽಸ್ತು ಕ್ಷಯಣಾಯ ಚ ತೇ ನಮಃ ।**
**ಕಪರ್ದಿನೇ ನಮಸ್ತೇಽಸ್ತು ನಮಸ್ತೇಽಸ್ತು ಪುಲಸ್ತಯೇ ॥೧೦೬॥**

**ನಮೋ ಗೋಷ್ಠ್ಯಾಯ ಗೃಹ್ಯಾಯ ಗ್ರಹಾಣಾಂ ಪತಯೇ ನಮಃ ।**
**ನಮಸ್ತಲ್ಪ್ಯಾಯ ಗೇಹಾಯ ಗುಹಾವಾಸಾಯ ತೇ ನಮಃ ॥೧೦೭॥**

---

ಉಗ್ರಃ–ವೈರಿಗಳನ್ನು ಸಂಹರಿಸುವಾಗ ಕೋಪಗೊಳ್ಳುವವನು. ಭೀಮಃ - ವೈರಿಗಳಿಗೆ ದರ್ಶನಮಾತ್ರದಿಂದಲೇ ಭಯವನ್ನುಂಟುಮಾಡುವವನು. ಶಂಗಃ - ಸುಖವನ್ನುಂಟುಮಾಡುವವನು. ತೀರ್ಥ್ಯಃ–ಕ್ಷೇತ್ರಗಳಲ್ಲಿ ವಾಸಮಾಡುವವನು. ಕೂಲ್ಯಃ - ನದೀತೀರದಲ್ಲಿ ಲಿಂಗರೂಪದಿಂದ ನೆಲಸಿರುವವನು. ಸಿಕತ್ಯಃ - ನದೀ ತೀರದಲ್ಲಿ ಮರಳಿನರೂಪದಿಂದ ವಾಸವಾಗಿರುವವನು. ॥೧೦೪॥

ಪ್ರವಾಹ್ಯಃ–ಪ್ರವಾಹದಲ್ಲಿ ನೆಲಸಿರುವವನು. ಇರಿಣ್ಯಃ- ಜವಳು (ಬಂಜರು) ಪ್ರದೇಶದಲ್ಲಿ ವಾಸವಾಗಿರುವವನು. ಚಂದ್ರಚೂಡಃ - ತಲೆಯಲ್ಲಿ ಚಂದ್ರನನ್ನು ಧರಿಸಿದವನು. ಪ್ರಪಥ್ಯಃ– ಜನರು ಸಂಚರಿಸುವ ಮಾರ್ಗದಲ್ಲಿ ನೆಲಸಿರುವವನು ॥೧೦೫॥

ಕಿಂಶಿಲಃ - ಚಿಕ್ಕ ಚಿಕ್ಕಕಲ್ಲುಗಳಿಂದ ಕೂಡಿರುವ ಪ್ರದೇಶದಸ್ವರೂಪನು. ಕ್ಷಯಣಃ - ಜನವಸತಿಗೆ ಯೋಗ್ಯವಾದ ಪ್ರದೇಶದ ಸ್ವರೂಪನು. ಕಪರ್ದೀ--ಜಟಾಧಾರಿಯು. ಪುಲಸ್ತಿಃ ಭಕ್ತರ ಮುಂಭಾಗದಲ್ಲಿ ಪ್ರಸನ್ನ ಮುದ್ರೆಯಿಂದ ನಿಲ್ಲುವವನು. ॥೧೦೬॥

ಗೋಷ್ಠ್ಯಃ– ಗೋಶಾಲೆಯಲ್ಲಿ ನೆಲಸಿರುವವನು. ಗೃಹ್ಯಃ–ಮನೆಗಳಲ್ಲಿರುವವನು. ಗ್ರಹಾಣಾಂಪತಿಃ–ಗ್ರಹಪತಿಯಾದ ಸೂರ್ಯನಸ್ವರೂಪದಿಂದ ಇರುವವನು. ತಲ್ಪ್ಯಃ- ಮಂಚದಮೇಲೆ ಮಲಗಿರುವವನು. ಗೇಹ್ಯಃ–ಮಹಡಿಯಲ್ಲಿ ವಾಸವಾಗಿರುವವನು. ಗುಹಾವಾಸಃ -ಗುಹೆಯಲ್ಲಿ ವಾಸಿಸುವವನು. ॥೧೦೭॥

ಕಾಟ್ಯಾಯ ಗಹ್ವರೇಷ್ಠಾಯ ಹ್ರದಯ್ಯಾಯ ಚ ತೇ ನಮಃ ।
ನಿವೇಷ್ಪ್ಯಾಯ ನಮಸ್ತುಭ್ಯಂ ಪಾಂಸವ್ಯಾಯ ಚ ತೇ ನಮಃ ॥೧೦೮॥

ರಜಸ್ಯಾಯ ನಮಸ್ತುಭ್ಯಂ ಪರಾತ್ಪರತರಾಯ ಚ ।
ನಮಸ್ತೇ ಹರಿಕೇಶಾಯ ಶುಷ್ಕ್ಯಾಯ ಚ ನಮೋ ನಮಃ ॥೧೦೯॥

ಹರಿತ್ಯಾಯ ನಮಸ್ತುಭ್ಯಂ ಹರಿದ್ವರ್ಣಾಯ ತೇ ನಮಃ ।
ನಮ ಊರ್ವ್ಯಾಯ ಸೂರ್ಮ್ಯಾಯ ಪರ್ಣ್ಯಾಯ ಚ ನಮೋ ನಮಃ॥೧೧೦॥

ನಮೋಽಪಗುರಮಾಣಾಯ ಪರ್ಣಶದ್ಯಾಯ ತೇ ನಮಃ ।
ಅಭಿಘ್ನತೇ ಚಾಖ್ಖಿದತೇ ನಮಃ ಪ್ರಖ್ಖಿದತೇ ನಮಃ ॥೧೧೧॥

ವಿಶ್ವರೂಪಾಯ ವಿಶ್ವಾಯ ವಿಶ್ವಾಧಾರಾಯ ತೇ ನಮಃ ।
ತ್ರಿಯಂಬಕಾಯ ರುದ್ರಾಯ ಗಿರಿಜಾಪತಯೇ ನಮಃ ॥೧೧೨॥

---

ಕಾಟ್ಯಃ–ಪ್ರವೇಶಿಸಲಶಕ್ಯವಾದ ಘೋರಾರಣ್ಯದಲ್ಲಿ ವಾಸಿಸುವವನು. ಗಹ್ವರೇಷ್ಠಃ-ಗಿರಿಗುಹೆಗಳಲ್ಲಿ ವಾಸಿಸುವವನು. ಹ್ರದಯ್ಯಃ–ಮಡುವಿನಲ್ಲಿ ಇರುವವನು. ನಿವೇಷ್ಪ್ಯಃ–ಹಿಮದ ನೀರಿನಲ್ಲಿರುವವನು. ಪಾಂಸವ್ಯಃ–ಪರಮಾಣುಗಳಲ್ಲಿ ಸೂಕ್ಷ್ಮರೂಪದಿಂದ ನೆಲಸಿರುವವನು. ॥೧೦೮॥

ರಜಸ್ಯಃ–ಧೂಳುಗಳಲ್ಲಿ ನೆಲಸಿರುವವನು. ಪರಾತ್ ಪರತರಃ–ಮಾಯೆಯಿಂದ ಬಿಡಲ್ಪಟ್ಟವನು. ಹರಿಕೇಶಃ–ವಾರ್ಧಕ್ಯಾವಸ್ಥೆಯಿಲ್ಲದವನು. ಶುಷ್ಕ್ಯಃ–ಒಣಗಿದ ಕಟ್ಟಿಗೆಗಳಲ್ಲಿ ಇರುವವನು. ॥೧೦೯॥

ಹರಿತ್ಯಃ-ಆರ್ದ್ರವಾದವಸ್ತುಗಳಲ್ಲಿ ನೆಲಸಿರುವವನು. ಹರಿದ್ವರ್ಣಃ–ಎಳೆಯ ಹುಲ್ಲಿನ ಬಣ್ಣದಂತೆ ಬಣ್ಣವುಳ್ಳವನು. ಊರ್ವ್ಯಃ–ಭೂಮಿಯಲ್ಲಿರುವವನು. ಸೂರ್ಮ್ಯಃ ನದಿಯಲ್ಲಿ ವಾಸಿಸಿರುವವನು. ಪರ್ಣ್ಯಃ–ಎಲೆಗಳಲ್ಲಿ ಇರುವವನು. ॥೧೧೦॥

ಅಪಗುರಮಾಣಃ-ಮೇಲಕ್ಕೆತ್ತಲ್ಪಟ್ಟ ಆಯುಧವುಳ್ಳವನು. ಪರ್ಣಶದ್ಯಃ–ಮರದೆಲೆಗಳ ರಾಶಿಯ ನಡುವೆ ಇರುವವನು. ಅಭಿಘ್ನನ್–ಶತ್ರುಗಳನ್ನು ಸಂಹರಿಸುವವನು. ಆಖ್ಖಿದನ್=ವೈರಿಗಳನ್ನು ಸ್ವಲ್ಪವಾಗಿ ವ್ಯಥೆಗೊಳಿಸುವವನು. ಪ್ರಖ್ಖಿದನ್-ಅತ್ಯಂತ ವ್ಯಥೆಗೊಳಿಸುವವನು. ॥೧೧೧॥

ವಿಶ್ವರೂಪಃ–ಕಾಮರೂಪಿಯು. ವಿಶ್ವಃ–ಜಗತ್ಸ್ವರೂಪನು. ವಿಶ್ವಾಧಾರಃ–

ಮಣಿಕೋಟೀರಕೂಟಸ್ಥಕಾಂತಿದೀಪ್ತಾಯ ತೇ ನಮಃ ।
ವೇದವೇದಾಂತವೇದ್ಯಾಯ ವೃಷಾರೂಢಾಯ ತೇ ನಮಃ ॥೧೧೩॥

ಅವಿಜ್ಞೇಯಸ್ವರೂಪಾಯ ಸುಂದರಾಯ ನಮೋ ನಮಃ ।
ಉಮಾಕಾಂತನಮಸ್ತೇಽಸ್ತು ನಮಸ್ತೇ ಸರ್ವಸಾಕ್ಷಿಣೇ ॥೧೧೪॥

ಹಿರಣ್ಯಬಾಹವೇ ತುಭ್ಯಂ ಹಿರಣ್ಯಾಭರಣಾಯ ಚ ।
ನಮೋ ಹಿರಣ್ಯರೂಪಾಯ ರೂಪಾತೀತಾಯ ತೇ ನಮಃ ॥೧೧೫॥

ಹಿರಣ್ಯಪತಯೇ ತುಭ್ಯಮಂಬಿಕಾಪತಯೇ ನಮಃ ।
ತದುಮಾಪತಯೇ ತುಭ್ಯಂ ನಮಃ ಪಾಪಪ್ರಣಾಶಕ ॥೧೧೬॥

---

ಜಗತ್ಕಾರಣನು. ತ್ರಿಯಂಬಕಃ–ಮುಕ್ಕಣ್ಣನು. ರುದ್ರಃ -ದುಃಖವನ್ನು ಹೋಗಲಾಡಿಸುವವನು. ಗಿರಿಜಾಪತಿಃ–ಪಾರ್ವತೀ ಕಾಂತನು. ||೧೧೨||

ಓ, ಶಿವನೇ, ನೀನು, ರತ್ನಖಚಿತವಾದ ಕಿರೀಟಗಳ ಗುಂತಿನ ಕಾಂತಿಯಿಂದ ಪ್ರಕಾಶಿಸುತ್ತಿರುವೆ. ವೇದವೇದಾಂತಗಳಿಂದ ತಿಳಿಯಲು ಶಕ್ಯನೂ, ವೃಷಭಾರೂಢನೂ ಆದ ನಿನ್ನನ್ನು ವಂದಿಸುವೆನು. ||೧೧೩||

ನಿನ್ನ ಸ್ವರೂಪವನ್ನು, ತಿಳಿಯುವುದೇ ಅಸಾಧ್ಯವಾಗಿರುವುದು. ಮತ್ತು ನೀನು ಸ್ವಪ್ರಕಾಶಸ್ವರೂಪನಾಗಿದ್ದು, ಸಕಲ ಪದಾರ್ಥಗಳನ್ನು ತಿಳಿದುಕೊಂಡಿರುವೆ. ಅಂತಹ ಗಿರಿಜಾಪತಿಯಾದ ನಿನ್ನನ್ನು ನಮಸ್ಕರಿಸುವೆನು. ||೧೧೪||

ಸುವರ್ಣದಂತೆ ಕಾಂತಿಯುಕ್ತವಾದ ಬಾಹುಗಳುಳ್ಳವನೂ ಸುವರ್ಣಮಯವಾದ ಆಭರಣಗಳನ್ನು ಧರಿಸಿರುವವನೂ, ಆಗಿರುವೆ. ಮತ್ತು, ಸೋಪಾಧಿಕವಾಗಿ, ಸುವರ್ಣದರೂಪದಿಂದಲೇ ಇರುವವನಾದರೂ, ವಸ್ತುತಃ ರೂಪರಹಿತನೂ ಆಗಿರುವೆ. ಅಂತಹ ನಿನ್ನನ್ನು ವಂದಿಸುವೆನು. ||೧೧೫||

ಧನಕನಕಾದಿಗಳಿಗೆ ನೀನೇ ಪ್ರಭುವಾಗಿರುವೆ. ಪಾಪಗಳನ್ನು ಹೋಗಲಾಡಿಸುವ ನೀನು ಅಂಬಿಕಾಪತಿಯೆಂದೂ, ಉಮಾಪತಿಯೆಂದೂ ಜನರಿಂದ ಸ್ತುತಿಸಲ್ಪಡುವೆ. ಅಂತಹ ನಿನಗೆರಗುವೆನು. ||೧೧೬||

ಮೀಢುಷ್ಟಮಾಯ ಭರ್ಗಾಯ ಕದ್ರುದ್ರಾಯ ಪ್ರಚೇತಸೇ ।
ತವ್ಯಸೇ ಬಿಲ್ವಪೂಜ್ಯಾಯ ನಮಃ ಕಲ್ಯಾಣರೂಪಿಣೇ ॥೧೧೭॥

ಅಪಾರಕಲ್ಯಾಣಗುಣಾರ್ಣವಾಯ
ಶ್ರೀ ನೀಲಕಂಠಾಯ ನಿರಂಜನಾಯ ।
ಕಾಲಾಂತಕಾಯಾಪಿ ನಮೋ ನಮಸ್ತೇ
ದಿಕ್ಕಾಲರೂಪಾಯ ನಮೋ ನಮಸ್ತೇ ॥೧೧೮॥

ವೇದಾಂತವೇದಿಸ್ತುತಸದ್ಗುಣಾಯ
ಗುಣಪ್ರವೀಣಾಯ ಗುಣಾಶ್ರಯಾಯ ।
ಶ್ರೀವಿಶ್ವನಾಥಾಯ ನಮೋ ನಮಸ್ತೇ
ಕಾಶೀನಿವಾಸಾಯ ನಮೋ ನಮಸ್ತೇ ॥೧೧೯॥

ಅಜಾತಸೌಂದರ್ಯಸುಧಾನಿಧಾನ
ಸಮೃದ್ಧಿರೂಪಾಯ ಶಿವಾಧವಾಯ ।

---

ಮೀಢುಷ್ಟಮಃ–ಇಷ್ಟಾರ್ಥಗಳನ್ನು ನೀಡುವವನು. ಭರ್ಗಃ ಪ್ರಕಾಶ ಸ್ವರೂಪನು, ರುದ್ರಃ–ಯಾವಾಗಲೂ ಭಯಂಕರನೆಂಬ ಸಂಜ್ಞೆಯುಳ್ಳವನು, ತವ್ಯಃ–ಅತ್ಯಂತ ವೃದ್ಧನು, ಬಿಲ್ವಪೂಜ್ಯಃ–ಬಿಲ್ವಪತ್ರೆಗಳಿಂದ ಪೂಜಿಸಲ್ಪಡುವವನು, ಕಲ್ಯಾಣರೂಪೀ–ಮಂಗಳಮೂರ್ತಿಯು. ॥೧೧೭॥

ಅಂಥ ಕಲ್ಯಾಣಗುಣಗಳಿಂದ ಕೂಡಿರುವವನೂ, ನೀಲಕಂಠನೂ, ಪಾಪ ರಹಿತನೂ, ಮೃತ್ಯುವನ್ನೇ ಜಯಿಸಿದವನೂ, ದಿಕ್ಕು, ಕಾಲ ಇವುಗಳ ರೂಪದಿಂದ ಇರುವವನೂ ಆದ ನಿನಗೆ ನಮಸ್ಕಾರ. ॥೧೧೮॥

ವೇದಾಂತಗಳನ್ನು ಅರಿತಿರುವವರು ನಿನ್ನ ಕಲ್ಯಾಣಗುಣಗಳನ್ನು ಅತಿಶಯವಾಗಿ ಸ್ತುತಿಸುವರು. ಮತ್ತು ನೀನು ಶ್ರೇಷ್ಠವಾದ ಕಾರುಣ್ಯಾದಿಗುಣಗಳಿಂದ ಕೂಡಿರುವೆ. ಜಗನ್ನಾಥನೂ, ಭಕ್ತಾನುಗ್ರಹಕ್ಕೋಸ್ಕರ ಕಾಶೀಕ್ಷೇತ್ರದಲ್ಲಿ ನೆಲಸಿರುವವನೂ ಆದ ನಿನ್ನನ್ನು ವಂದಿಸುವೆನು. ॥೧೧೯॥

ಓ ಶಂಕರನೇ, ನಿನ್ನ ಸೌಂದರ್ಯವು ಕೃತ್ರಿಮವಲ್ಲ. ಸ್ವಾಭಾವಿಕವಾದದ್ದು. ಅಂತಹ ಸೌಂದರ್ಯವೆಂಬ ಸುಧಾರಾಶಿಗೆ ನೀನು ಗಣಿಯಂತಿರುವೆ. ಮತ್ತು ನೀನು

ಧಾರಾಧರಾಕಾರ ನಮೋ ನಮಸ್ತೇ
ಧಾರಾಸ್ವರೂಪಾಯ ನಮೋ ನಮಸ್ತೇ ॥೧೨೦॥

ನೀಹಾರತಾರಾಕರಕಾಕರಾಕ
ಪ್ರಕಾರಹಾರಾಪ್ರತಿಹಾರವೀರ ।
ವೀರೇಶ್ವರಾಪಾರದಯಾನಿಧಾನ
ಪಾಹಿ ಪ್ರಭೋ ಪಾಹಿ ನಮೋ ನಮಸ್ತೇ ॥೧೨೧॥

॥ ವ್ಯಾಸ ಉವಾಚ ॥

ಏವಂ ಸ್ತುತ್ವಾ ಮಹಾದೇವಂ ಪ್ರಣಿಪತ್ಯ ಪುನಃ ಪುನಃ ।
ಕೃತಾಂಜಲಿಪುಟಸ್ತಸ್ಥೌ ಪಾರ್ಶ್ವೇ ದುಂಢಿವಿನಾಯಕಃ ॥೧೨೨॥

ತಮಾಲೋಕ್ಯ ಸುತಂ ಪ್ರಾಪ್ತಂ ವೇದವೇದಾಂತಪಾರಗಂ ।
ಸ್ನೇಹಾಶ್ರುಧಾರಾಸಂವೀತಂ ಪ್ರಾಹೇಚ್ಛುರಿದಮಾದಿಶತ್ ॥೧೨೩॥

ಇತಿ ಶ್ರೀ ಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಪೂರ್ವಾರ್ಧೇ
ಗಣೇಶಕೃತರುದ್ರಾಧ್ಯಾಯಸ್ತುತಿರ್ನಾಮ ದಶಮೋಽಧ್ಯಾಯಃ

---

ಸರ್ವಮಂಗಳೆಯಾದ ಅಂಬಿಕೆಯ ಸ್ವಾಮಿಯೆನಿಸಿರುವೆ. ಮೇಘದಂತೆ ಕೃಷ್ಣವರ್ಣವುಳ್ಳ ಮತ್ತು ಅದ್ಭುತವಾದ ಆಕಾರವುಳ್ಳ ನಿನಗೆ ನಮಸ್ಕಾರ. ॥೧೨೦॥

ಹಿಮ, ನಕ್ಷತ್ರ ಇವುಗಳಿಗೆ ಆಶ್ರಯಭೂತನೆನಿಸಿದವನೂ, ಕಾಕ, ಹಂಸ ಮುಂತಾದ ಪಕ್ಷಿಗಳ ವರ್ಣದಿಂದ ರಂಜಿಸುವ ರತ್ನಗಳನ್ನೇ ಹಾರವನ್ನಾಗಿ ಮಾಡಿಕೊಂಡಿರುವವನೂ ಆದ ಪರಶಿವನೇ, ನೀನು ಅಸದೃಶವಾದ ಪರಾಕ್ರಮದಿಂದ ಕೂಡಿರುವವನಲ್ಲವೆ! ವೀರರಿಗೆ ವೀರನೆನಿಸಿದರೂ ಕೃಪಾಳುವಾಗಿರುವ ನೀನು ನಮ್ಮನ್ನು ರಕ್ಷಿಸು. ಸರ್ವದಾ ನಿನಗೆ ನಮಸ್ಕರಿಸುತ್ತಿರುವೆವು." ॥೧೨೧॥

ಹೀಗೆಂದು ದುಂಢೀ ಗಣೇಶನು ಶಿವನನ್ನು ಸ್ತುತಿಸಿ, ಮತ್ತೆ ಮತ್ತೆ ನಮಸ್ಕರಿಸಿ, ಅಂಜಲಿಬದ್ಧನಾಗಿ ಶಿವನ ಪಕ್ಕದಲ್ಲಿ ನಿಂತನು. ॥೧೨೨॥

ಈ ರೀತಿಯಲ್ಲಿ ತನ್ನ ಬಳಿಗೆ ಬಂದು ನಿಂತಿರುವ, ವೇದವೇದಾಂತಗಳನ್ನು ಅರಿತಿರುವವನೂ, ಆನಂದಾಶ್ರುಗಳನ್ನು ಸುರಿಸುವವನೂ ಆದ ಪುತ್ರನನ್ನು ನೋಡಿ

ತತಃ ಪ್ರತ್ಯಕ್ಷತಾಂ ಪ್ರಾಪ್ತಃ ಪ್ರೀತಸ್ತತ್ತಪಸಾ ಶಿವೇ ।
ಮಯಿ ಪ್ರಸನ್ನೇ ದೇವೇಶೇ ಯಯಾಚೇ ಸ ವರಂ ವರಂ ॥೧೧೬॥

॥ ಶಿಲಾದ ಉವಾಚ ॥

ನಮೋ ನಮಸ್ತೇ ಗಿರಿಜಾಸಹಾಯ
ನಮೋ ನಮಸ್ತೇ ಸುಕೃತಸ್ವರೂಪ ।
ನಮೋ ನಮಸ್ತೇಽನ್ನಪತೇ ಮಹೇಶ
ನಮೋ ನಮಸ್ತೇಽಸ್ತು ನಮೋ ನಮಸ್ತೇ ॥೧೧೭॥

ತ್ವತ್ಪಾದಾಂಬುಜಭಕ್ತಿರ್ಮೇ ನಿಶ್ಚಲಾ ಭವತು ಪ್ರಭೋ ।
ತ್ವಮೇವ ಶರಣಂ ಶಂಭೋ ಗತಿಸ್ತ್ವಂ ಜಗತಾಂ ಪ್ರಭೋ ॥೧೧೮॥

ಕರ್ಮಾಣ್ಯಸ್ಯ ಫಲೋನ್ಮುಖಾನಿ ಭಗವಂಸ್ತ್ವತ್ಪಾದಪದ್ಮಂ ಯತೋ
ದೃಷ್ಟಂ ದೋಷವಿವರ್ಜಿತಂ ಸುಖಯುತಂ ತಾವತ್ಕರೋತಿ ಸ್ವತಃ ।

---

ಆತನ ಭಕ್ತಿಗೂ ತಪಸ್ಸಿಗೂ ಸುಪ್ರೀತನಾಗಿ ನಾನು ಆತನಿಗೆ ಪ್ರತ್ಯಕ್ಷನಾದೆನು. ಆತನಲ್ಲಿ ನಾನು ಹೃಷ್ಟನಾಗಿ ಬೇಕಾದ ವರವನ್ನು ಕೇಳಿಕೊ ಎಂದು ಹೇಳಿದಾಗ ಆ ಶಿಲಾದನು ಅತ್ಯುತ್ತಮವಾದ ವರವನ್ನು ಈರೀತಿ ಬೇಡಿಕೊಂಡನು. ॥೧೧೬॥

ಆ ಶಿಲಾದನು ಪ್ರತ್ಯಕ್ಷನಾದ ನನ್ನನ್ನು ನೋಡಿ ಅತ್ಯಂತ ಆನಂದದಿಂದಲೂ ಭಕ್ತಿಯಿಂದಲೂ ಈರೀತಿ ಸ್ತೋತ್ರಮಾಡಿದನು. " ಹೇ ಗಿರಿಜಾಪತಿಯೇ, ನಿನಗೆ ನಾನು ನಮಸ್ಕರಿಸುವೆನು. ನೀನು ಸಕಲ ಪುಣ್ಯಸ್ವರೂಪನಾಗಿರುವೆ. ಜಗತ್ತಿನಲ್ಲಿರುವ ಆಹಾರವಸ್ತುಗಳಿಗೆಲ್ಲಾ ನೀನೇ ಅಧಿಪತಿ. ಸಮಸ್ತ ದೇವತೆಗಳಿಗೂ ನೀನೇ ದೇವರಾಗಿರುವೆ. ಅಂಥಾ ನಿನ್ನನ್ನು ನಮಸ್ಕರಿಸುತ್ತೇನೆ. ॥೧೧೭॥

ಪ್ರಭೋ, ನನಗೆ ನಿನ್ನ ಚರಣಕಮಲಗಳಲ್ಲಿ ಶಾಶ್ವತವಾದ ಭಕ್ತಿ ನಿಲ್ಲುವಂತೆ ಅನುಗ್ರಹಿಸು. ನನಗೆ ನೀನೇ ಶರಣು. ನೀನೇ ಸಮಸ್ತ ಜಗತ್ತಿಗೂ ಅಧಿಪತಿ. ॥೧೧೮॥

ಸ್ವಾಮಿಯೇ ಪರಮೇಶ್ವರನೇ, ಈ ನಿನ್ನ ಚರಣಕಮಲಗಳ ದರ್ಶನವು ಇಂದು ನನಗೆ ಒದಗಿ ನಾನು ಪವಿತ್ರನಾದೆನು. ನನ್ನ ಪುಣ್ಯಕರ್ಮಗಳೆಲ್ಲಾ ಇಂದು ಫಲಿಸಿರುವುದಕ್ಕೆ ನಿನ್ನ ಸಾಕ್ಷಾತ್ಕಾರವೇ ನಿದರ್ಶನ. ನಿನ್ನ ಪಾದಪದ್ಮವು ಸಕಲ

**ತತ್ಪಾದನಮ್ರನಿವೃಂದಮಾನಸಮನಃಪದ್ಮಪ್ರವಿಷ್ಟಂ ಪ್ರಭೋ**
**ತನ್ಮೇ ಮಾನಸಪಂಕಜೇ ಕ್ಷಣಮಿತಿ ಸ್ವಾಮಿನ್ ಮುದೇ ಜಾಯತಾಂ॥೧೧೯॥**

ವಾಜಶ್ಚ ಮೇಽಸ್ತು ಪ್ರಸವಶ್ಚ ಮೇಽಸ್ತು
ತ್ವತ್ಪೂಜಯಾ ಸಾ ಪ್ರಯತಿಶ್ಚ ಮೇಽಸ್ತು ।
ಮಹೇಶ್ವರಾಶು ಪ್ರಸಿತಿಶ್ಚ ಮೇ ಸ್ತು
ಧೀತಿಶ್ಚ ಮೇಽಸ್ತು ಕ್ರತುರಸ್ತು ಶಂಭೋ ॥೧೨೦॥

ಸ್ವರಶ್ಚ ಮೇಽಸ್ತು ವರದೇಶ ಶಂಭೋ
ಶ್ಲೋಕಶ್ಚ ಮೇಽಸ್ತು ಶ್ರುತಿಗೀತಕೀರ್ತೇ ।
ಶ್ರಾವಶ್ಚ ಮೇಽಸ್ತು ಶ್ರುತಿರಸ್ತು ಶಂಭೋ
ಶಿವಾಭಿಧಾನಶ್ರವಣಾಯ ನಿತ್ಯಂ ॥೧೨೧॥

---

ದೋಷವಿವರ್ಜಿತವಾಗಿದೆ. ಸಕಲ ಸುಖಗಳಿಗೂ ಕಾರಣವಾಗಿರುತ್ತದೆ. ಇಂಥ ನಿನ್ನ ಚರಣಕಮಲವನ್ನು ಮುನಿಗಳೆಲ್ಲರೂ ಅತ್ಯಂತ ಪ್ರಯತ್ನದಿಂದ ಸದಾ ಮನಸ್ಸಿನಲ್ಲಿ ಧ್ಯಾನಿಸುತ್ತಾ ಧಾರಣೆಮಾಡಿರುತ್ತಾರೆ. ಅದೇ ಪಾದಪಂಕಜವು ನನ್ನ ಮನಸ್ಸರೋಜದಲ್ಲಿಯೂ ನಿಶ್ಚಲವಾಗಿ ಇದ್ದುಕೊಂಡು ಒಂದು ಕ್ಷಣಕಾಲವಾದರೂ ನನ್ನ ಮನಸ್ಸಿಗೆ ಪರಮಸುಖಪ್ರಕಾಶವನ್ನು ಕೊಡಲಿ. ॥೧೧೯॥

ಹೇ ಮಹೇಶ್ವರ, ಸತ್ವಗುಣಮಾತ್ರಕ್ಕೆ ಕಾರಣವಾದ ಆಹಾರವನ್ನು ನನಗೆ ಅನುಗ್ರಹಿಸು. ನನಗೆ ಆ ಅನ್ನವನ್ನು ಊಟಮಾಡು ಎಂಬ ಅನುಜ್ಞೆಯನ್ನು ಕೊಡು. ನಿನ್ನ ಆರಾಧನೆಯಿಂದ ನನಗೆ ಪರಮ ಶುದ್ಧಿಯು ದೊರಕುವಂತೆ ಕರುಣಿಸು. ನನಗೆ ಅನ್ನವಿಷಯಕವಾದ ಉತ್ಸುಕತೆಯು ಜಾಗ್ರತೆಯಾಗಿ ಏರ್ಪಡಲಿ. ನನಗೆ ಅನ್ನಧಾರಣಾಯೋಗ್ಯತೆಯುಂಟಾಗಲಿ. ನಾನು ಅನ್ನಕಾರಣವಾದ ಯಾಗಾದಿ ಸತ್ಕರ್ಮಗಳನ್ನು ಅನುಷ್ಠಿಸುತ್ತಿರುವಂತೆ ಅನುಗ್ರಹಮಾಡಬೇಕು.॥೧೨೦॥

ಸಕಲ ವರಗಳನ್ನು ಅನುಗ್ರಹಮಾಡುವುದರಲ್ಲಿ ಸಮರ್ಥನಾದ ಶಂಭುವೇ! ನನಗೆ ಮಂತ್ರಸಂಬಂಧವಾದ ಉದಾತ್ತಾನುದಾತ್ತಸ್ವರಿತರೂಪವಾದ ಸ್ವರಜ್ಞಾನ ವುಂಟಾಗಲಿ. ನಿನ್ನನ್ನು ಸ್ತೋತ್ರಮಾಡುವ ಶಕ್ತಿಯೂ ಮೊದಲು ನನಗೆ ಉಂಟಾಗಲಿ. ವೇದಪ್ರಖ್ಯಾತವಾದ ಕೀರ್ತಿಯುಳ್ಳ ಸ್ವಾಮಿಯೇ, ನಿನ್ನ ನಾಮಗಳನ್ನು

**ಜ್ಯೋತಿಶ್ಚ ಮೇಽಸ್ತು ಜ್ವಲನಸ್ವರೂಪ**
**ಸುವಶ್ಚ ಮೇಽಸ್ತು ತ್ರಿಪುರಾಸುರಾರೇ**
**ಪ್ರಾಣಶ್ಚ ಮೇ ತಾವದಪಾನಯುಕ್ತೋ**
**ವ್ಯಾನಶ್ಚ ಮೇಽಸುಶ್ಚ ತಥೈವ ಚಿತ್ತಂ ॥೧೨೨॥**

**ಅಧೀತಂ ಚ ತಥಾ ವಾಕ್ಚ ಮನಶ್ಚಕ್ಷುಶ್ಚ ಮೇ ಪ್ರಭೋ ।**
**ಶ್ರೋತ್ರಂ ದಕ್ಷೋ ಬಲಂ ಚೋಜಃ ಸಹಶ್ಚಾಯುಶ್ಚ ಮೇ ಪ್ರಭೋ ೧೨೩॥**

**ಜರಾ ಚಾತ್ಮಾ ಚ ಮೇ ಶಂಭೋ ತನೂಶ್ಶರ್ಮ ಚ ವರ್ಮ ಚ ।**
**ಅಂಗಾನ್ಯಸ್ಥೀನಿ ಭಗವನ್ ಪರೂಂಷಿ ಚ ಭವಂತು ಮೇ ॥೧೨೪॥**

---

ಮತ್ತೊಬ್ಬರಿಗೆ ತಿಳಿಸುವ ಸಾಮರ್ಥ್ಯವೂ ನಿತ್ಯವೂ ಸ್ವತಃ ಆದರದಿಂದ ಅದನ್ನು ಕೇಳುವ ಆಸೆಯೂ ಉಂಟಾಗುವಂತೆ ಕರುಣಿಸು. ||೧೨೧||

ಎಲೈ ತೇಜೋರೂಪಿಯೇ, ನನಗೆ ಯಾವಾಗಲೂ ಬೆಳಕು ದೊರೆಯಲಿ. ಓ ತ್ರಿಪುರಾಸುರಧ್ವಂಸಕನೇ, ನನಗೆ ಸ್ವರ್ಗವು ದೊರೆಯಲಿ. ದೇವ, ಅಪಾನಸಮೇತವಾದ ಪ್ರಾಣವಾಯುವೂ, ವ್ಯಾನವಾಯುವೂ ಇವುಗಳಲ್ಲಿ ಅಡಕವಾಗಿರುವ ಅಸುರೂಪವಾದ ವಾಯುವೂ ಮತ್ತು ಮನಸ್ಸಿನಿಂದುಂಟಾಗುವ ಜ್ಞಾನವೂ ಸಿದ್ಧಿಸಲಿ. ||೧೨೨||

ಪ್ರಭೋ, ನನಗೆ ಆ ಮನೋಜನ್ಯಜ್ಞಾನಕ್ಕೆ ವಿಷಯಗಳಾದ ದ್ರವ್ಯಗಳೂ (ಅಧೀತಂ) ವಾಙ್ಮನಶ್ಚಕ್ಷುಶ್ರೋತ್ರವೆಂಬ ಈ ನಾಲ್ಕು ಇಂದ್ರಿಯಪಾಟವವೂ ಉಂಟಾಗಲಿ. ಸ್ವಾಮಿಯೇ, ಜ್ಞಾನೇಂದ್ರಿಯಗತವಾದ ನೈಪುಣ್ಯವೂ (ದಕ್ಷ) ಕರ್ಮೇಂದ್ರಿಯಗಳ ಸಾಮರ್ಥ್ಯವೂ (ಬಲಂ) ಬಲಕ್ಕೆ ಕಾರಣೀಭೂತವಾದ ಎಂಟನೆಯ ಧಾತುವೂ (ಓಜಃ) ಶತ್ರುವಿಷಯಕವಾದ ತಿರಸ್ಕಾರಭಾವನೆಯೂ (ಸಹಃ) ಮತ್ತು ಆಯುಸ್ಸೂ ಸಹ ನನಗೆ ಉಂಟಾಗಲಿ. ||೧೨೩||

ಶಂಭುವೇ ! ನನಗೆ ವಾರ್ಧಕ್ಯವೂ, ಪರಮಾತ್ಮಜ್ಞಾನವೂ ಅಲಂಕಾರಸಾಧನೀಭೂತವಾದ ಸುಂದರವಾದ ದೇಹವೂ, ಸಕಲ ಸುಖಗಳೂ, ಮತ್ತು ಶರೀರರಕ್ಷಣೆಗೆ ಬೇಕಾದ ಕವಚಗಳೂ ಉಂಟಾಗಲಿ. ಎಲೈ, ಭಗವಂತನೇ ! ಅವಯವಸೌಷ್ಠವವೂ ಆದರದರ ಸ್ಥಾನದಲ್ಲಿ ಸರಿಯಾಗಿರುವ ಮೂಳೆಗಳೂ, ಅಲ್ಲದೇ ಪರ್ವಗಳೂ (ಗಿಣ್ಣುಗಳೂ) ನನಗೆ ಲಭಿಸಲಿ. ||೧೨೪||

ಶರೀರಾಣಿ ಭವಂತ್ವೀಶ ತಾನಿ ರಮ್ಯಾಣಿ ಮೇ ಪ್ರಭೋ ।
ಜ್ಯೈಷ್ಠ್ಯಂ ಚ ಮೇಽಧಿಪತ್ಯಂ ಚ ಮನ್ಯುರ್ಭಾಮಶ್ಚ ಮೇ ಪ್ರಭೋ ॥೧೨೫॥

ಅಮಶ್ಚಾಂಭಶ್ಚ ಜೇಮಾ ಚ ಮಹಿಮಾ ವರಿಮಾ ಚ ಮೇ ।
ಪ್ರಥಿಮಾ ಚಾಸ್ತು ಗೌರೀಶ ವರ್ಷ್ಮಾ ಚ ದ್ರಾಘುಯಾ ಚ ಮೇ ॥೧೨೬॥

ವೃದ್ಧಂ ವೃದ್ಧಿಶ್ಚ ಸತ್ಯಂ ಚ ಶ್ರದ್ಧಾ ಚಾಸ್ತು ಜಗಚ್ಚ ಮೇ ।
ಧನಂ ವಶಾಸ್ತ್ವಿಷಿಶ್ಚಾಸ್ತು ಕ್ರೀಡಾ ಮೋದಶ್ಚ ಮೇ ಪ್ರಭೋ ॥೧೨೭॥

---

ಪ್ರಭೋ ! ನನಗೆ ಸುಂದರವಾದ ಶರೀರಾವಯವಗಳುಂಟಾಗಲಿ. ಈಶ್ವರನೇ ಶ್ರೇಷ್ಠತ್ವವೂ, ಯಜಮಾನಧರ್ಮವೂ ನನಗೆ ಉಂಟಾಗಲಿ. ಸ್ವಾಮಿಯೇ ! ಮಾನಸಿಕವಾದ ಕೋಪವೂ (ಮನ್ಯು) ಮತ್ತು ಬಾಹ್ಯಕಾರಣಗಳಿಂದ ಕೋಪವೂ (ಭಾಮಃ) ನಮಗೆ ಪ್ರಾಪ್ತವಾಗಲಿ. ॥೧೨೫॥

ಮಹಾದೇವನೇ, ಶತ್ರುಗಳಿಂದ ಇವನ ಸ್ವರೂಪವಿಷ್ಟೇ ಎಂದು ನಿರ್ಣಯಿಸಲು ಸಾಧ್ಯವಾಗದಂತಿರುವ ಶಕ್ತಿಯೂ (ಅಮಃ) ಶೈತ್ಯ ಮತ್ತು ಮಾಧುರ್ಯ ಗುಣಗಳಿಂದ ಯುಕ್ತವಾದ ನೀರೂ, ಜಯಸಾಮರ್ಥ್ಯವೂ, ಜಯದಿಂದುಂಟಾಗುವ ದ್ರವ್ಯಾದಿಸಂಪತ್ತುಗಳೂ ಮತ್ತು ಸರ್ವರಿಂದಲೂ ಪೂಜ್ಯತೆಯೂ ಸಹ ನನಗೆ ಲಭಿಸಲಿ. ಎಲೈ ಗೌರೀರಮಣನೇ, ಮನೆ, ಹೊಲ, ಗದ್ದೆಗಳ ವಿಸ್ತಾರವೂ (ಅಂದರೆ ವಿಸ್ತಾರವಾದ ಹೊಲ, ಮನೆ ಮತ್ತು ಗದ್ದೆಗಳೂ) ಪುತ್ರಪೌತ್ರಾದಿ ಸಂಪತ್ತೂ (ವರ್ಷ್ಮಾ) ಮತ್ತು ಅವಿಚ್ಛಿನ್ನವಾದ ಪುತ್ರಸಂತಾನವೂ (ದ್ರಾಘುಯಾ) ಸಹ ನನಗೆ ಪ್ರಾಪ್ತವಾಗಲಿ. ॥೧೨೬॥

ಪ್ರಭೋ, ಅತಿಶಯವಾದ ಅನ್ನ ಮತ್ತು ದ್ರವ್ಯಸಂಪತ್ತುಗಳೂ, ವಿದ್ಯಾದಿ ಗುಣಗಳಿಂದ ಉತ್ಕರ್ಷವೂ, ಸುಳ್ಳಾಡದಿರುವಿಕೆಯೂ, ಪರಲೋಕವಿರುವುದೆಂಬ ಬುದ್ಧಿಯೂ (ಶ್ರದ್ಧಾ) ಸ್ಥಾವರಜಂಗಮಾತ್ಮಕವಾದ ಪ್ರಪಂಚಜ್ಞಾನವೂ ನನಗೆ ಉಂಟಾಗಲಿ. ದೇವನೇ, ಚಿನ್ನವೇ ಮುಂತಾದ ದ್ರವ್ಯಗಳೂ, ಎಲ್ಲರನ್ನೂ ತನ್ನ ಹಿಡಿತದಲ್ಲಿ ಇಟ್ಟುಕೊಳ್ಳುವ ಸಾಮರ್ಥ್ಯವೂ (ವಶಃ) ಶರೀರಕಾಂತಿಯೂ, ಪಗಡೇ ಆಟವೇ ಮುಂತಾದ ಆಟಗಳೂ ಅಲ್ಲದೇ ಇದರಿಂದುಂಟಾಗುವ ಆನಂದವೂ ಸಹ ನನಗೆ ಬರಲಿ. ॥೧೨೭॥

**ಜಾತಂ ಜನಿಷ್ಯಮಾಣಂ ಚ ಸೂಕ್ತಂ ಮೇ ಸುಕೃತಂ ಚ ಮೇ ।**
**ವಿತ್ತಂ ವೇದ್ಯಂ ಚ ಭೂತಂ ಚ ಭವಿಷ್ಯಂ ಚ ಸುಗಂ ಚ ಮೇ॥೧೨೮॥**

**ಸುಪಥಂ ಋದ್ಧಮೃದ್ಧಿಶ್ಚ ಕ್ಲಪ್ತಂ ಕ್ಲಪ್ತಿಶ್ಚ ಮೇ ಮತಿಃ ।**
**ಸುಮತಿಃ ಶಂ ಮಯಶ್ಚಾಸ್ತು ಪ್ರಿಯಂ ಚಾಸ್ತು ಶಿವಾಶು ಮೇ॥೧೨೯॥**

**ಅನುಕಾಮಶ್ಚ ಕಾಮಶ್ಚ ಶಂಭೋ ಸೌಮನಸಂ ಚ ಮೇ ।**
**ಭದ್ರಂ ಶ್ರೇಯಶ್ಚ ವಸ್ಯಶ್ಚ ಯಶೋ ಮೇ ಸುಭಗಶ್ಚ ಮೇ ॥೧೩೦॥**

---

ಮಹೇಶ್ವರನೇ, ಹಿಂದೆ ಜನಿಸಿರುವ ಮಕ್ಕಳೂ ಮುಂದೆ ಹುಟ್ಟುವ ಮಕ್ಕಳೂ ಸಹ ಶಾಶ್ವತವಾಗಿರುವಂತೆ ನನ್ನನ್ನನುಗ್ರಹಿಸು. ದೇವ, ಋಗ್ವೇದಸಮೂಹವೂ (ಸೂಕ್ತ) ಅದರ ಅಧ್ಯಯನಾದಿಗಳಿಂದುಂಟಾದ ಅಪೂರ್ವವೂ ಅಂದರೆ ಪುಣ್ಯ ವಿಶೇಷವೂ (ಸುಕೃತಂ) ನನಗೆ ದೊರೆಯಲಿ. ದೇವೇಶನೇ, ಪೂರ್ವದಲ್ಲಿ ಪಡೆದಿರುವ ದ್ರವ್ಯಾಶೆಯೂ (ವಿತ್ತಂ) ಇನ್ನು ಮುಂದೆ ದೊರೆಯುವ ಐಶ್ವರ್ಯ ಸಂಪತ್ತುಗಳೂ (ವೇದ್ಯಂ) ನನಗೆ ಶಾಶ್ವತವಾಗಿರಲಿ. ಸ್ವಾಮಿ, ಹಿಂದಿನಿಂದಲೂ ಬಂದಿರುವ ಹೊಲ ಗದ್ದೆ ಮುಂತಾದವುಗಳೂ (ಭೂತಂ) ಮುಂದೆ ಬರುವ ಮನೆ ಮತ್ತು ಮಠ ಮುಂತಾದವುಗಳೂ (ಭವಿಷ್ಯಂ) ಮತ್ತು ಬಂಧುಜನಗಳು ವಾಸಮಾಡುವ ಗ್ರಾಮಗಳಿಗೆ ಸುಖಪ್ರಯಾಣವೂ ನನಗೆ ಪ್ರಾಪ್ತವಾಗಲಿ. ||೧೨೮||

ಎಲೈ ಮಂಗಳಸ್ವರೂಪನಾದ ಶಿವನೇ, ನಾನು ಸಂಚಾರಮಾಡುವ ದಾರಿಯು ಕಳ್ಳಕಾಕರ ಭಯವಿಲ್ಲದಂತಾಗಲಿ. ಅಭಿವೃದ್ಧಿಹೊಂದುತ್ತಿರುವ ದ್ರವ್ಯಸಂಪತ್ತು ಅಥವಾ ಅನುಷ್ಠಾನಮಾಡಿದ ಕರ್ಮಫಲಗಳು ಶಾಶ್ವತವಾಗಿ ನೆಲಸಲಿ. ಮುಂದೆ ಅನುಷ್ಠಾನ ಮಾಡುವ ಯಾಗಾದಿಗಳು ಸಫಲವಾಗಲಿ. ಯಾವಾಗಲೂ ನನ್ನ ಕಾರ್ಯಕ್ಕೆ ಸಾಕಾಗುವಷ್ಟು ದ್ರವ್ಯಗಳು ಒದಗಲಿ? ನನ್ನ ಸಾಮರ್ಥ್ಯವು ನಿಯಮಿತವಾಗಿರಲಿ. ಪದಾರ್ಥ ಮಾತ್ರ ವಿಷಯಕವಾದ ನಿಶ್ಚಯವೂ ನನಗೆ ಉಂಟಾಗಲಿ. ದೇವ, ಕಠಿಣವಾದ ರಾಜಕಾರ್ಯಗಳಲ್ಲಿ ನನಗೆ ಒಳ್ಳೆಯ ಜ್ಞಾನವು ದೊರೆಯಲಿ. ಐಹಿಕಾಮುಷ್ಮಿಕ ಸುಖಗಳೂ (ಇಹಪರಗಳೆರಡರಲ್ಲೂ ಸುಖಗಳು) ನನಗೆ ಉಂಟಾಗಲಿ. (ಶಂಮಯ) ಎಂದರೆ ಪ್ರೀತಿಕರವಾದ ಪದಾರ್ಥಗಳೂ ಸಹ ನನಗೆ ಜಾಗ್ರತೆ ಉಂಟಾಗಲಿ. ||೧೨೯||

ದೇವನೇ, ಈ ಲೋಕದಲ್ಲಿ ನಮಗೆ ಅನುಕೂಲವೆಂದು ತೋರುವ ಪ್ರಕ್ಚಂದನಾದಿ ಪದಾರ್ಥಗಳೂ (ಅನುಕಾಮಃ) ಮುಂದೆ ಹಿತಕರವೆನಿಸಿರುವ ಸ್ವರ್ಗಮೋಕ್ಷ

**ದ್ರವಿಣಂ ಚಾಸ್ತು ಯಂತಾ ಚ ಧರ್ತಾ ಕ್ಷೇಮಶ್ಚ ಮೇ ಧೃತಿಃ ।**
**ವಿಶ್ವಂ ಮಹಶ್ಚ ಸಂವಿಚ್ಚ ಜ್ಞಾತ್ರಂ ಸೂಶ್ಚ ಪ್ರಸೂಶ್ಚ ಮೇ ॥೧೩೦॥**

**ಶೀರಂ ರಯೋ ಋತಂ ಚಾಸ್ತು ಭಗವನ್ನಮೃತಂ ಚ ಮೇ ।**
**ಅಯಕ್ಷ್ಮಂ ಚಾನಾಮಯಚ್ಚ ಜೀವಾತು ಶ್ಚಾಸ್ತು ಮೇ ಸದಾ॥೧೩೨॥**

---

ಮುಂತಾದವುಗಳೂ, (ಕಾಮ) ನನಗೆ ಒದಗಲಿ. ಶಂಭೋ! ಮನಸ್ಸಿಗೆ ಸಮಾಧಾನ ವನ್ನುಂಟುಮಾಡುವ ಬಂಧುವರ್ಗವೂ (ಸೌಮನಸ್ಯಂ) ಇಹಲೋಕದಲ್ಲಿ ರಮಣೀ ಯವೆನಿಸುವ ಕಲ್ಯಾಣಸಂಪತ್ತುಗಳೂ (ಭದ್ರಂ) ಪರಲೋಕದಲ್ಲಿ ಹಿತಕಾರಿಯಾ ದುದೂ (ಶ್ರೇಯಃ) ವಾಸಮಾಡಲು ಯೋಗ್ಯವಾದ ಮನೆ ಮಠ ಮುಂತಾದವು ಗಳೂ, ಕೀರ್ತಿಯೂ ಮತ್ತು ಸೌಭಾಗ್ಯವೂ ಸಹ ನಿನ್ನನುಗ್ರಹದಿಂದ ನನಗೆ ಪ್ರಾಪ್ತವಾಗಲಿ. ||೧೩೦||

ದೇವನೇ, ನನಗೆ ದ್ರವ್ಯಸಂಪತ್ತುಂಟಾಗಲಿ. ನಮ್ಮನ್ನು ನಿಯಮಿಸುವ ಆಚಾರ್ಯನೂ, ಪೋಷಣೆಮಾಡುವ ತಂದೆ ಮುಂತಾದವರೂ ದೊರೆಯಲಿ. ನಮ್ಮಲ್ಲಿರುವ ದ್ರವ್ಯವನ್ನು ಕಾಪಾಡುವ ಶಕ್ತಿಯೂ (ಕ್ಷೇಮಃ) ಕಷ್ಟಬಂದಾಗಲೂ ಎದೆಗುಂದದಂತಹ ಧೈರ್ಯವೂ ನನಗೆ ಲಭಿಸಲಿ. ಮಹೇಶ್ವರನೇ, ಸರ್ವಜನ ಗಳಿಗೂ ಅನುಕೂಲತೆಯೂ (ವಿಶ್ವಂ) ಪೂಜ್ಯತೆಯೂ, ವೇದಶಾಸ್ತ್ರಾದಿ ಜ್ಞಾನವೂ, ಮತ್ತೊಬ್ಬರಿಗೆ ಉಪದೇಶಮಾಡುವ ಸಾಮರ್ಥ್ಯವೂ, ಮತ್ತು ಪುತ್ರಾದಿಗಳನ್ನು ಪ್ರೇರಣೆಮಾಡುವ ಶಕ್ತಿಯೂ ಅಲ್ಲದೆ ಸೇವಕರೇ ಮುಂತಾದವರನ್ನು ನಿಯಮ ಮಾಡುವ (ಅಪ್ಪಣೆಮಾಡುವ) ಸಾಮರ್ಥ್ಯವೂ ನನಗೆ ಉಂಟಾಗಲಿ. ||೧೩೧||

ಓ ಭಗವನ್! ಎತ್ತು, ನೊಗ ಮುಂತಾದ ಕೃಷಿಗಳಿಗೆ ಸಾಧನವಾದ ಪದಾರ್ಥಗಳೂ, (ಶೀರಂ) ಇವುಗಳಿಗೆ ಒದಗುವ ತೊಂದರೆಗಳ ನಿವಾರಣೆಯೂ (ಲಯಃ) ಯಜ್ಞಾದಿಕರ್ಮಗಳೂ, (ಋತಂ) ಇವುಗಳಿಂದುಂಟಾಗುವ ಫಲಗಳೂ (ಅಮೃತಂ) ನನಗೆ ಲಭಿಸಲಿ. ದೇವನೇ, ರಾಜಯಕ್ಷ್ಮ (ಕ್ಷಯ) ಮುಂತಾದ ಘೋರ ವ್ಯಾಧಿಗಳು ನನಗೆ ಬಾರದಿರಲಿ. ಮತ್ತು ಜ್ವರ ಮುಂತಾದ ಸಣ್ಣ ರೋಗಗಳೂ ನನಗೆ ಪ್ರಾಪ್ತವಾಗಬಾರದು. ಪ್ರಭೋ! ಸುಖಜೀವನಕ್ಕೆ ಕಾರಣಭೂತವಾಗಿ ರೋಗಗಳನ್ನು ಉಪಶಮನ ಮಾಡುವುದಾದ ಔಷಧಿಗಳು ನನಗೆ ಯಾವಾಗಲೂ ದೊರೆಯುತ್ತಿರಲಿ. ||೧೩೨||

ದೀರ್ಘಾಯುತ್ವಮನಮಿತ್ರಂ ಚ ಸರ್ವದಾಪ್ಮೃಭಯಂ ಚ ಮೇ ।
ಸುಗಂ ಚ ಶಯನಂ ಸೂಷಾ ಸುದಿನಂ ಚಾಸ್ತು ಮೇ ಸದಾ ॥೧೩೩॥

ಊರ್ಕ್ಚ ಮೇ ಸೂನೃತಾ ಚಾಸ್ತು ಪಯಶ್ಚಾಸ್ತು ರಸಶ್ಚ ಮೇ ।
ಘೃತಂ ಮಧು ಚ ಸಗ್ಧಿಶ್ಚ ಸಪೀತಿಶ್ಚ ಕೃಷಿಶ್ಚ ಮೇ ॥೧೩೪॥

ವೃಷ್ಟಿಶ್ಚ ಜೈತ್ರಮೌದ್ಭಿದ್ಯಂ ರಯಿಶ್ಚಾಸ್ತು ಸದಾಪಿ ಮೇ ।
ರಾಯಃ ಪುಷ್ಟಂ ಚ ಪುಷ್ಟಿಶ್ಚ ವಿಭು ಚ ಪ್ರಭು ಚ ಪ್ರಭೋ ॥೧೩೫॥

---

ಮಹೇಶ! ನನಗೆ ಯಾವಾಗಲೂ ಅಪಮೃತ್ಯುಭಯವು ಬರದಿರಲಿ. ದೀರ್ಘಾಯುಷ್ಯವೂ, ಶತ್ರುಗಳಿಂದ ನಿರ್ಭಯವೂ, ಮತ್ತಾವನಿಮಿತ್ತದಿಂದಲೂ ಭೀತಿಯೇ ಇಲ್ಲದಂತೆಯೂ ಕರುಣಿಸು. ಪ್ರಭೋ! ಮಂಗಳಕರವಾದ ಗಮನವನ್ನೂ ಅಂದರೆ (ಎಲ್ಲರೂ ಅಂಗೀಕರಿಸಿರುವಂತೆ ಆಚರಿಸುವಿಕೆಯನ್ನೂ) ಹಾಸಿಗೆ, ದಿಂಬು ಮುಂತಾದ ಉಪಕರಣಗಳೊಡಗೂಡಿದ ಶಯ್ಯಾಸಂಪತ್ತನ್ನೂ, ಸ್ನಾನ ಸಂಧ್ಯಾವಂದನಾದಿಗಳಿಂದ ಕೂಡಿದ ಶೋಭನವಾದ ಪ್ರಾತಃಕಾಲವನ್ನೂ, ಮತ್ತು ಯಜ್ಞ, ಯಾಗ, ದಾನ ಮುಂತಾದವುಗಳಿಂದೊಡಗೂಡಿದ ಶುಭದಿವಸಗಳನ್ನೂ ದೊರಕಿಸು. ||೧೩೩||

ಸಾರಭೂತವಾದ ಅನ್ನ ವಿಶೇಷಗಳು, (ರಸ) ತುಪ್ಪ, ಜೇನು, ಇವುಗಳೂ, ಬಂಧುಗಳೊಡನೆ ಸಹಭೋಜನವೂ, ಜೊತೆಯಲ್ಲಿ ಪಾನವೂ ಮತ್ತು ಕೃಷಿಯೂ ಸಹ ನನಗೆ ಉಂಟಾಗಲಿ. ||೧೩೪||

ಪ್ರಭುವೇ, ಮಳೆಯೂ, ಜಯಶೀಲವಾದ ಕ್ಷೇತ್ರವೂ, (ಅಂದರೆ ಒಳ್ಳೆಯ ಹೊಲಗದ್ದೆಗಳೂ) ವೃಕ್ಷ, ಪೊದೆ ಮುಂತಾದುವುಗಳ ಉತ್ಪತ್ತಿಯೂ, ಸುವರ್ಣವೂ (ರಯಿಃ) ಮಣಿ, ಮುತ್ತು ಮುಂತಾದವುಗಳೂ (ರಾಯಿಃ) ಹೆಚ್ಚಾದ ಸುವರ್ಣ ಸಮೃದ್ಧಿಯೂ (ಪುಷ್ಟಂ) ಶರೀರಪೋಷಣೆಯೂ (ಪುಷ್ಟಿಃ) ಮತ್ತು ವಿಭು, ಪ್ರಭುಗಳೂ ಅಂದರೆ ಸರ್ವವ್ಯಾಪಿತ್ವವೂ ಸರ್ವಾಧಿಪತ್ಯವೂ ಲಭಿಸಲಿ. ||೧೩೫||

**ಬಹು ಭೂಯಶ್ಚ ಪೂರ್ಣಂ ಚ ತಥಾ ಪೂರ್ಣತರಂ ಚ ಮೇ ।**
**ಅಕ್ಷಿತಿಶ್ಚಾಸ್ತು ಭಗವನ್ನೂಯವಾಶ್ಚ ಭವಂತು ಮೇ ॥೧೩೬॥**

**ಅನ್ನಮನ್ನಪತೇ ಮೇಽಸ್ತು ಕೇನಾಸ್ತು ಕ್ಷುಚ್ಚ ಮೇ ಪ್ರಭೋ ।**
**ವ್ರೀಹಯಶ್ಚ ಯವಾ ಮಾಷಾಸ್ತಿಲಾಮುದ್ಗಾಶ್ಚ ಮೇ ಶಿವ ॥೧೩೭॥**

**ಖಲ್ವಾಶ್ಚ ಸಂತು ಗೋಧೂಮಾ ಮಸುರಾಶ್ಚ ಪ್ರಿಯಂಗವಃ ।**
**ಅಣವಃ ಸಂತು ಮೇ ನಿತ್ಯಂ ಶ್ಯಾಮಾಕಾಃ ಸಂತು ಮೇ ಪ್ರಭೋ ॥೧೩೮॥**

---

ಎಲೈ ಭಗವಂತನೇ, (ಬಹು, ಭೂಯಃ, ಪೂರ್ಣಂ, ಪೂರ್ಣತರಂ ಮತ್ತು ಅಕ್ಷಿತಿ ಎಂಬ ಈ ಐದು ಶಬ್ದಗಳೂ ಹಿಂದಿನ ವಿಭು ಮತ್ತು ಪ್ರಭುಶಬ್ದಗಳಂತೆ ಮುಂದೆ ಹೇಳುವ ಧಾನ್ಯಗಳ ವಿಷಯದಲ್ಲಿ ಉತ್ತರೋತ್ತರ ಅಭಿವೃದ್ಧಿಯನ್ನು ಸೂಚಿಸುವ ಪರಿಮಾಣವಾಚಕಪದಗಳು.) ಪ್ರಭು ಎಂಬ ಶಬ್ದಕ್ಕಿಂತಲೂ ಬಹು ಎಂಬ ಶಬ್ದದಿಂದ ತೋರುವ ಅರ್ಥವು, ಅದಕ್ಕಿಂತಲೂ ಹೆಚ್ಚೆಂದೂ ಅದಕ್ಕಿಂತಲೂ ಭೂಯಃ ಎಂಬುದು ಇನ್ನೂ ಹೆಚ್ಚೆಂದೂ, ಅದಕ್ಕಿಂತಲೂ ಪೂರ್ಣಂ ಎಂಬುದು ಮತ್ತೂ ಹೆಚ್ಚೆಂತಲೂ, ಪೂರ್ಣತರಂ ಎಂಬುದು ಅದಕ್ಕಿಂತಲೂ ಅಧಿಕವೆಂದೂ, ಅರ್ಥವನ್ನು ಸೂಚಿಸುತ್ತವೆ. ನನಗೆ ನೀಚಧಾನ್ಯವೆನಿಸಿದ ಯವಧಾನ್ಯವು ಅಪರಿಮಿತ ವಾಗಿ ಲಭಿಸಲಿ. (ಸರ್ವಸಂಪತ್ತೂ ಅತಿಶಯವಾಗಿ ದೊರಕಲಿ ಎಂದು ಭಾವ).॥೧೩೬॥

ಅನ್ನಗಳಿಗೆ ಅಧಿಪತಿಯಾದ ಸ್ವಾಮಿಯೇ, ನನಗೆ ಅನ್ನವು ಪೂರ್ಣವಾಗಿ ಉಂಟಾಗಲಿ. ಈ ಅನ್ನವನ್ನು ಊಟಮಾಡುವುದರಿಂದ ನನಗೆ ಹಸಿವಾಗದಿರಲಿ. ಪ್ರಭೋ! ಶಿವ! ನನಗೆ ಬತ್ತವೂ, ಯವಧಾನ್ಯವೂ, ಉದ್ದೂ, ಎಳ್ಳೂ ಮತ್ತು ಹೆಸರು ಧಾನ್ಯವೂ ಸಹ ಸಂಪೂರ್ಣವಾಗಿ ದೊರೆಯಲಿ. ॥೧೩೭॥

ಪ್ರಭೋ, ಮಹೇಶ್ವರನೇ, ಖಲ್ವಧಾನ್ಯಗಳೂ (ಅಂದರೆ ಹೆಸರುಕಾಳಿಗಿಂತಲೂ ಸ್ವಲ್ಪ ದಪ್ಪವಾದ ಧಾನ್ಯಗಳು. ಇದಕ್ಕೆ ಆಥರ್ವಣವೇದಭಾಷ್ಯದಲ್ಲಿ "ಖಲ್ವಾಶ್ಚ ಣಕಾಃ" ಎಂದು ಕಡಲೆ ಎಂಬರ್ಥವನ್ನು ಮಾಡಿರುವರು.) ಗೋದುವೆಯೂ, ಮಸುರಧಾನ್ಯವೂ (ಅಂದರೆ ಹೆಸರಿನಂತೆಯೇ ತೊವ್ವೆಮಾಡಲು ಉಪಯೋಗಿಸುವ ದ್ವಿದಳಧಾನ್ಯ ; ಅಂದರೆ ತೊಗರಿ ಎಂದು ಹೇಳಬಹುದು.) ಪ್ರಿಯಂಗುಧಾನ್ಯಗಳೂ (ನವಣೆಯೂ) ಅಣುಧಾನ್ಯವೂ (ಸಣ್ಣ ಬತ್ತಗಳೂ) ಮತ್ತು ಶ್ಯಾಮಾಕಧಾನ್ಯಗಳೂ

ನೀವಾರಾದ್ಯಾಶ್ಚ ಮೇ ಸಂತು ಗೃಹೇ ಸರ್ವಾನ್ನನಾಯಕ ।
ಅಶ್ಮಾ ಚ ಮೃತ್ತಿಕಾ ಚಾಸ್ತು ಗಿರಯಃ ಪರ್ವತಾಶ್ಚ ಮೇ ॥೧೩೯॥

ಸಿಕತಾಃ ಸಂತು ಭಗವನ್ಮೇ ವನಸ್ಪತಯಶ್ಚ ಮೇ ।
ಹಿರಣ್ಯಮಸ್ತ್ವಯಶ್ಚಾಸ್ತು ತಥಾ ಸೀಸಂ ತ್ರಪುಶ್ಚ ಮೇ ॥೧೪೦॥

ಶ್ಯಾಮಂ ಲೋಹಂ ಚ ಮೇಗ್ನಿಶ್ಚ ಗೃಹೇ ತಿಷ್ಠಂತು ಸರ್ವಥಾ ।
ಆಪಶ್ಚ ವೀರುಧಃ ಸಂತು ತಥೈವೋಷಧಯೋಽಪಿ ಮೇ ॥೧೪೧॥

ಕೃಷ್ಟಪಚ್ಯಂ ಚ ಬಹುಧಾ ಮಮ ತಿಷ್ಠತು ವೇಶ್ಮನಿ ।
ತಥೈವಾಕೃಷ್ಟಪಚ್ಯಂ ಚ ವನಸಂಭವಮಸ್ತು ಮೇ ॥೧೪೨॥

---

(ಇದನ್ನು ನವಣೆಯೆಂದೇ ವ್ಯವಹರಿಸುವರು.) ಸಹ ನನಗೆ ಪ್ರತಿನಿತ್ಯವೂ ಅತಿಶಯವಾಗಿ ಉಂಟಾಗಲಿ. ॥೧೩೮॥

ಎಲ್ಲರಿಗೂ ಅನ್ನವನ್ನು ಕೊಟ್ಟು ಕಾಪಾಡುತ್ತಾ ಜಗದೊಡೆಯನಾಗಿರುವ ದೇವನೇ, ನನ್ನ ಮನೆಯಲ್ಲಿ ಯಾವಾಗಲೂ ನೀವಾರವೇ ಮುಂತಾದ ಕಾಡಿನಲ್ಲಿ ಬೆಳೆಯುವ ತೃಣಧಾನ್ಯಗಳು ಸಮೃದ್ಧಿಯಾಗಿರಲಿ. ಅಲ್ಲದೇ ಕಲ್ಲುಗಳೂ, ಮಣ್ಣುಗಳೂ ಬೆಟ್ಟಗಳೂ ಮತ್ತು ಪರ್ವತಗಳೂ ಸಹ ನನಗೆ ಶುಭಪ್ರದವಾಗಿರಲಿ. ॥೧೩೯॥

ಮಹಾದೇವನೇ, ಮರಳುಗಳೂ ಮತ್ತು ವನಸ್ಪತಿಗಳೂ ಸಹ ನನಗೆ ಶುಭಪ್ರದವಾಗಿ ಉಂಟಾಗಲಿ. ಎಲೈ ಭಗವಂತನೇ, ಸುವರ್ಣವೂ, ಕಬ್ಬಿಣವೂ, ಸೀಸವೂ ಮತ್ತು ತವರವೂ ಸಹ ನನಗೆ ಯಥೇಚ್ಛವಾಗಿ ಲಭಿಸಲಿ. ॥೧೪೦॥

ದೇವದೇವನೇ, ಉಕ್ಕು, ಕಂಚು, ಹಿತ್ತಾಳೆ ಮುಂತಾದ ಲೋಹಗಳೂ, ಮತ್ತು ಅಗ್ನಿಯೂ ಸಹ ನನ್ನ ಮನೆಯಲ್ಲಿ ಯಾವಾಗಲೂ ಶಾಶ್ವತವಾಗಿರಲಿ. ನೀರುಗಳೂ, ಬಳ್ಳಿಗಳೂ ಮತ್ತು ಜ್ಯೋತಿರ್ಲತೆಗಳೂ (ಔಷಧಿಗಳೂ) ಸಹ ಸದಾ ನನಗೆ ದೊರೆಯುತ್ತಿರಲಿ. ॥೧೪೧॥

ಕೃಷಿಯಿಂದ ಪರಿಪಾಕ ಹೊಂದಿದ ಧಾನ್ಯಗಳು ಯಥೇಚ್ಛವಾಗಿ ನನ್ನ ಮನೆಯಲ್ಲಿರಲಿ. ಓ ದೇವನೇ, ಅದರಂತೆಯೇ ಕೃಷಿ ಮುಂತಾದವುಗಳಲ್ಲದೆ, ಕೇವಲ ಈ ಕಾಡುಗಳಲ್ಲಿ ಬೆಳೆಯುವ ಧಾನ್ಯಾದಿಗಳೂ ನನಗೆ ದೊರೆಯಲಿ. ॥೧೪೨॥

ಗೋಮಹಿಷ್ಯಾದಯೋ ಗ್ರಾಮ್ಯಾಃ ಪಶವಃ ಸಂತು ಮೇ ಗೃಹೇ ।
ಸದಾ ಯಜ್ಞೇನ ಕಲ್ಪಂತಾಮಾರಣ್ಯಾಃ ಪಶವಶ್ಚ ಮೇ ॥೧೪೩॥

ವಿತ್ತಂ ವಿತ್ತಿಶ್ಚ ಭೂತಂ ಚ ಭೂತಿಶ್ಚ ವಸತಿರ್ವಸು ।
ಶಿವಪೂಜಾದಿಕಂ ಕರ್ಮ ಶಕ್ತಿಶ್ಚ ಶಿವಪೂಜನೇ ॥೧೪೪॥

ಏಮಶ್ಚಾಸ್ತು ಮಮೇತಿಶ್ಚ ಗತಿಶ್ಚಾಸ್ತು ಶಿವಾರ್ಚನೇ ।
ಅಗ್ನಿರಿಂದುಶ್ಚ ಮೇ ಸೋಮಃ ಸವಿತಾ ಚ ಸರಸ್ವತೀ ॥೧೪೫॥

ಪೂಷಾ ಬೃಹಸ್ಪತಿರ್ಮಿತ್ರಸ್ತ್ವಷ್ಟಾ ಚ ವರುಣಶ್ಚ ಮೇ ।
ಧಾತಾ ಚ ವಿಷ್ಣುರಸ್ಯಸ್ತು ಗೃಹಕರ್ಮಕರಸ್ತು ಮೇ ॥೧೪೬॥

---

ಯಾಗಾದ್ಯನುಷ್ಠಾನಕ್ಕೋಸ್ಕರ ಗ್ರಾಮವಾಸಿಗಳಾದ ಹಸು, ಎಮ್ಮೆಮುಂತಾದ ಪ್ರಾಣಿಗಳೂ, ಕಾಡಿನಲ್ಲಿ ವಾಸಮಾಡುವ ಜಿಂಕೆ ಮುಂತಾದ ಪಶು ಪ್ರಾಣಿಗಳೂ ನನ್ನ ಮನೆಯಲ್ಲಿ ಸದಾ ನೆಲಸಿರಲಿ. ॥೧೪೩॥

ಮಹೇಶ್ವರನೇ, ಹಿಂದೆ ಪಡೆದಿರುವ ದ್ರವ್ಯಗಳೂ, ಮುಂದೆ ಲಾಭರೂಪವಾಗಿ ಬರುವ ಹಣವೂ, ಐಶ್ವರ್ಯಯುಕ್ತವಾದ ಪುತ್ರಪೌತ್ರಾದಿ ಸಂಪತ್ತುಗಳೂ, ತನ್ನ ಸ್ವಕೀಯವಾದ ಐಶ್ವರ್ಯವೂ, ಮನೆ ಮುಂತಾದ ವಾಸಸ್ಥಳಗಳೂ, ಗೋ ಮುಂತಾದ ವಸುಗಳೂ, ಶಿವಾರಾಧನಕರ್ಮವೇ ಮುಂತಾದ ಕರ್ಮಗಳೂ, ಮತ್ತು ಈ ಶಿವ ಪೂಜೆಮಾಡಲು ಸಾಮರ್ಥ್ಯವೂ ಸಹ ನನಗೆ ಉಂಟಾಗಲಿ. ॥೧೪೪॥

ಹೊಂದಲು ಯೋಗ್ಯವಾದ ಸುಖವೂ (ಏಮಃ) ಇಷ್ಟಪ್ರಾಪ್ತಿಯುಂಟಾಗಲು ಉಪಾಯವೂ (ಇತಿಃ) ಶಿವಪೂಜೆಯಲ್ಲಿ ಇಷ್ಟಪ್ರಾಪ್ತಿಯೂ, ಸಹ ನನಗೆ ಉಂಟಾಗಲಿ. ದೇವನೇ, ಅಗ್ನಿ, ಚಂದ್ರ, ಸೋಮ, ಸೂರ್ಯ ಮತ್ತು ಸರಸ್ವತೀ, ಈ ದೇವತೆಗಳೂ ನನಗೆ ಅನುಗ್ರಹಮಾಡಲಿ. ॥೧೪೫॥

ಇಂದ್ರ, ಬೃಹಸ್ಪತಿ, ಸೂರ್ಯ (ಮಿತ್ರ) ತ್ವಷ್ಟಾ, ವರುಣ, ಬ್ರಹ್ಮ ಮತ್ತು ವಿಷ್ಣು ಈ ದೇವತೆಗಳು ನನ್ನ ಮನೆಯ ಕೆಲಸವನ್ನು ಮಾಡುವಂತೆ ಅನುಗ್ರಹಿಸು. ॥೧೪೬॥

ಅಶ್ವಿನೌ ಚ ಮಮೇಶಾನ ತಿಷ್ಠೇತಾಂ ಸರ್ವದಾ ಗೃಹೇ ।
ಮರುತಶ್ಚ ಪ್ರಸರ್ಪಂತು ವಿಶ್ವೇದೇವಾಶ್ಚ ಮೇ ಗೃಹೇ ॥೧೪೭॥

ತ್ವದಾಜ್ಞಾವಶಗಾನೇತಾನಗ್ನೀಂದ್ರಾದಿಸುರಾನ್ ಶಿವ ।
ಮದ್ವಶಾನ್ಕುರು ವಿಶ್ವೇಶ ದಕ್ಷಾನ್ಮದ್ಗೃಹಕರ್ಮಣಿ ॥೧೪೮॥

ಅಂತರಿಕ್ಷಂ ಚ ಪೃಥಿವೀ ದ್ಯೌರಪ್ಯಸ್ತು ದಿಶಶ್ಚ ಮೇ ।
ಮೂರ್ಧಾ ಪ್ರಜಾಪತಿಶ್ಚಾಸ್ತು ಮೇ ಭವತ್ಕೃಪಯಾ ಭವ ॥೧೪೯॥

ಅಂಶುಶ್ಚ ರಶ್ಮಿರಪ್ಯಸ್ತು ಮೇಧಾಭ್ಯೋಽಧಿಪತಿಶ್ಚ ಮೇ ।
ಉಪಾಂಶುರಂತರ್ಯಾಮಶ್ಚ ಮಮ ಸ್ಯಾದೈಂದ್ರವಾಯುವಃ ॥೧೫೦॥

ಮೇ ಮೈತ್ರಾವರುಣಶ್ಚಾಸ್ತು ತಥೈವಾಸ್ತು ಮಮಾಶ್ವಿನಃ ।
ಪ್ರತಿಪ್ರಸ್ಥಾನಶುಕ್ರೌ ಚ ಮಂಥೀ ಚಾಗ್ರಯಣಶ್ಚ ಮೇ ॥೧೫೧॥

---

ಎಲೈ ಈಶಾನಮೂರ್ತಿಯೇ! ನನ್ನ ಮನೆಯಲ್ಲಿ ಸದಾ ಅಶ್ವಿನೀದೇವತೆಗಳು (ನಾಸತ್ಯ ಮತ್ತು ದಸ್ರರೆಂಬ ಹೆಸರುಳ್ಳ) ವಾಸಮಾಡುತ್ತಾ ಸಕಲ ರೋಗಗಳನ್ನೂ ನಿವಾರಣೆಮಾಡಲಿ. ಅಲ್ಲದೆ ಸಪ್ತಮರುತ್ತುಗಳೂ, ವಿಶ್ವೇದೇವತೆಗಳೂ ಸಹ ನನ್ನ ಮನೆಯಲ್ಲಿ ಸಂಚರಿಸಲಿ. ॥೧೪೭॥

ಎಲೈ ಮಂಗಳಸ್ವರೂಪನೆನಿಸಿದ ಶಿವನೇ, ಜಗದೊಡೆಯನಾಗಿರುವ ನೀನು ನಿನ್ನಾಜ್ಞೆಯನ್ನು ಪರಿಪಾಲಿಸಿ ನಡೆಯುವ ಈ ಅಗ್ನಿ, ಇಂದ್ರ ಮುಂತಾದ ದೇವತೆಗಳನ್ನು ನನ್ನ ಅಧೀನರಾಗುವಂತೆ ಮಾಡಿ ನನ್ನ ಮನೆಕೆಲಸಗಳಲ್ಲಿ ದಕ್ಷರಾಗಿ ಕೆಲಸ ನಡೆಸುವಂತೆ ಆಜ್ಞಾಪಿಸು. ॥೧೪೮॥

ಓ ದೇವದೇವನೇ, ಆಕಾಶ, ಭೂಮಿ, ಸ್ವರ್ಗ ಇವುಗಳೂ ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ ಎಂಬ ನಾಲ್ಕು ದಿಕ್ಕುಗಳೂ, ಊರ್ಧ್ವದಿಕ್ಕು, (ಮೂರ್ಧಾ) ಮತ್ತು ಬ್ರಹ್ಮನೂ ಸಹ ನಿನ್ನ ದಯೆಯಿಂದ ನನಗೆ ಅನುಗ್ರಹಮಾಡಲಿ. ॥೧೪೯॥

ಅಂಶು, ರಶ್ಮಿ, ಅದಾಭ್ಯ, ಅಧಿಪತಿ, ಉಪಾಂಶು, ಅಂತರ್ಯಾಮ, ಐಂದ್ರವಾಯು, ಮೈತ್ರಾವರುಣ, ಆಶ್ವಿನ, ಪ್ರತಿಪ್ರಸ್ಥಾನ, ಶುಕ್ರ, ಮಂಥೀ, ಆಗ್ರಯಣ, ಈ ಸೋಮಗ್ರಹ ವಿಶೇಷಗಳೂ ನನಗೆ ಅನುಕೂಲವಾಗಿರಲಿ. ॥೧೫೦-೧೫೧॥

ವೈಶ್ವದೇವೋ ಧ್ರುವಶ್ಚಾಪಿ ತಥಾ ವೈಶ್ವಾನರಶ್ಚ ಮೇ ।
ಋತುಗ್ರಹಾಶ್ಚ ಮೇ ಸಂತು ಸಾತಿಗ್ರಾಹ್ಯಾಶ್ಚ ಶಂಕರ ॥೧೫೨॥

ಐಂದ್ರಾಗ್ನೌ ವೈಶ್ವದೇವಶ್ಚ ಗ್ರಹಾಃ ಸೋಮೋಪಯೋಗಿನಃ ।
ತಥಾ ಮರುತ್ವತೀಯಾಶ್ಚ ಗ್ರಹಾಃ ಸಂತು ಸದಾಪಿ ಮೇ ॥೧೫೩॥

ಮಾಹೇಂದ್ರಶ್ಚ ತಥಾದಿತ್ಯಃ ಸಾವಿತ್ರಶ್ಚಾಸ್ತು ಮೇ ಗ್ರಹಾಃ ।
ಸಾರಸ್ವತಶ್ಚ ಪೌಷ್ಣಶ್ಚ ತಥಾ ಪಾತ್ನೀವತಶ್ಚ ಮೇ ॥೧೫೪॥

ಸ ಹಾರೀಯೋಜನಶ್ಚಾಸ್ತು ಮಮೇಧ್ಮಶ್ಚಾಸ್ತು ಸರ್ವಥಾ ।
ಬರ್ಹಿರ್ವೇದಿಶ್ಚ ಧಿಷ್ಣಿಯಾಶ್ಚ ಸ್ರುಚಶ್ಚ ಚಮಸಾಶ್ಚ ಮೇ ॥೧೫೫॥

ಗ್ರಾವಾಣಃ ಸ್ವರವಃ ಸಂತು ತಥೈವೋಪರವಾಶ್ಚ ಮೇ ।
ತೇ ಮೇ ಧಿಷವಣೇ ಸಂತು ತೇ ದ್ರೋಣಕಲಶಶ್ಚ ಮೇ ॥೧೫೬॥

ವಾಯವ್ಯಾನಿ ಚ ಮೇ ಸಂತು ಪೂತಭೃಚ್ಚಾಸ್ತು ಮೇ ಪ್ರಭೋ ।
ತಥೈವಾಧವನೀಯಶ್ಚ ತದಾಗ್ನೀಧ್ರಂ ಚ ಮೇ ಪ್ರಭೋ ॥೧೫೭॥

ಹವಿರ್ಧಾನಂ ಚ ಮೇ ಸ್ವಾಮಿನ್ಗೃಹಾಶ್ಚೈವ ಸದಶ್ಚ ಮೇ ।
ಪುರೋಡಾಶಾಶ್ಚ ಮೇ ಸ್ವಾಮಿನ್ಪಚತಾಶ್ಚ ಭವಂತು ಮೇ ॥೧೫೮॥

---

ಹೇ ಶಂಕರ, ವೈಶ್ವದೇವ, ಧ್ರುವ, ವೈಶ್ವಾನರ, ಋತುಗ್ರಹ, ಸಾತಿಗ್ರಾಹ್ಯ, ಐಂದ್ರಾಗ್ನಿ, ವೈಶ್ವದೇವ, ಮರುತ್ವತೀಯ, ಮಾಹೇಂದ್ರ, ಆದಿತ್ಯ, ಸಾವಿತ್ರ, ಸಾರಸ್ವತ, ಪೌಷ್ಣ, ಪಾತ್ನೀವತ, ಮತ್ತು ಹಾರಿಯೋಜನ ಎಂಬ ಸೋಮೋಪಯೋಗಿಗಳಾದ ದೇವತೆಗಳು ನನಗೆ ಅನುಗ್ರಹೋನ್ಮುಖರಾಗಲಿ. ||೧೫೨-೧೫೩-೧೫೪||

ಎಲೈ ಸ್ವಾಮಿಯೇ, ಇಧ್ಮ, ಬರ್ಹಿ, ವೇದಿ, ಧಿಷ್ಣಿಯ, ಸ್ರುಚ, ಚಮಸ, ಗ್ರಾವಾಣ, ಸ್ವರವ, ಉಪರವ, ಈ ಯಜ್ಞಾಂಗ ದ್ರವ್ಯಗಳೆಲ್ಲವೂ ನನ್ನ ಜ್ಞಾನದ ಏಳಿಗೆಗಾಗಿ ಏರ್ಪಡಲಿ. ಮತ್ತು ದ್ರೋಣ, ಕಲಶ, ವಾಯವ್ಯ, ಪೂತಭೃತ್, ಆಧವನೀಯ, ಆಗ್ನೀಧ್ರ, ಹವಿರ್ಧಾನ, ಗೃಹಾ, (ಪತ್ನೀ ಶಾಲೆ ಮುಂತಾದವುಗಳು) ಸದಸ್ಸು, ಪುರೋಡಾಶ, ಪಚತ, (ಶಾಮಿತ್ರ ಮುಂತಾದವುಗಳು) ಅವಭೃಥ,

**ತಥೈವಾವಭೃತಃ ಸಂತು ಸ್ವಗಾಕಾರಶ್ಚ ಮೇ ಪ್ರಭೋ ।**
**ಅಗ್ನಿರ್ಘರ್ಮಶ್ಚ ಮೇಽರ್ಕಶ್ಚ ಸೂರ್ಯಃ ಪ್ರಾಣಶ್ಚ ಮೇ ಪ್ರಭೋ॥೧೫೯॥**

**ಅಶ್ವಮೇಧಶ್ಚ ಪೃಥಿವೀ ದ್ಯೌರಪ್ಯದಿತಿರಸ್ತು ಮೇ ।**
**ಮೇ ಶಕ್ವರೀರಂಗುಲಯೋ ದಿಶಶ್ಚ ವಿದಿಶಶ್ಚ ಮೇ ॥೧೬೦॥**

**ತಥಾ ಯಜ್ಞೇನ ಕಲ್ಪಂತಾಂ ಋಕ್ಚ ಸಾಮ ಚ ಮೇ ಪ್ರಭೋ ।**
**ಸ್ತೋಮೋ ಯಜುಶ್ಚ ದೀಕ್ಷಾ ಚ ತಪಶ್ಚಾಸ್ತು ಋತುಶ್ಚ ಮೇ ॥೧೬೧॥**

**ವ್ರತಂ ಚಾಹೋರಾತ್ರಯೋರ್ಯದ್ವೃಷ್ಟ್ಯಾ ತು ನಿಯಮಾತ್ಮಕಂ ।**
**ಬೃಹದ್ರಥಂತರೇ ಯಜ್ಞೇ ಕಲ್ಪೇತಾಂ ಫಾಲಲೋಚನ ॥೧೬೨॥**

---

ಸ್ವಗಾಕಾರ ಈ ಯಜ್ಞಾಂಗದ್ರವ್ಯಗಳೂ ನನಗೆ ಸುಕೃತರೂಪವಾದ ಫಲವನ್ನು ಅನುಗ್ರಹಿಸಲಿ. ॥೧೫೫-೧೫೬-೧೫೭-೧೫೮॥

ಪ್ರಭೋ, ಅಗ್ನಿ, ಘರ್ಮ (ಪ್ರವರ್ಗ್ಯ) ಅರ್ಕ (ಇಂದ್ರಾಯಾರ್ಕವತೇ ಪುರೋಡಾಶಂ ; ಇತಿ ವಿಹಿತೋ ಯಾಗಃ ಸೂರ್ಯಃ ಎಂದು ಹೇಳಿದೆ) ಪ್ರಾಣ (' ಪ್ರಾಣಾಯಸ್ವಾಹಾ ' ಎಂದು ವಿಧಾನಮಾಡಿರುವ ಹೋಮವು ಪ್ರಾಣವೆನಿಸುವುದು) ಅಶ್ವಮೇಧಯಾಗ, ಪೃಥಿವೀ, ಅಂತರಿಕ್ಷ, ಅದಿತಿ, ಈ ದೇವತೆಗಳೂ, ಶಕ್ವರೀ ಮತ್ತು ಅಂಗುಲಿ ಎಂಬ ಪುರುಷನ ಅವಯವ ವಿಶೇಷಗಳೂ, ಪೂರ್ವ ಪಶ್ಚಿಮ ದಕ್ಷಿಣೋತ್ತರರೂಪವಾದ ದಿಕ್ಕುಗಳೂ, ಅಗ್ನಿ, ನೈಋತ್ಯ, ವಾಯುವ್ಯ ಮತ್ತು ಈಶಾನ್ಯವೆಂಬ ವಿದಿಕ್ಕುಗಳೂ, ನನ್ನ ಯಾಗದಿಂದ ತಮ್ಮ ತಮ್ಮ ಕಾರ್ಯಗಳಲ್ಲಿ ಸಮರ್ಥವಾಗಲಿ. ಅಲ್ಲದೇ ಋಕ್ಕು ಮತ್ತು ಸಾಮವೆಂಬ ಮಂತ್ರವಿಶೇಷಗಳೂ, ಸ್ತೋಮವೂ (ಸಾಮವನ್ನು ಆವೃತ್ತಿಮಾಡುವ ಸ್ತೋತ್ರವು) ಯಜುರ್ವೇದ ಮಂತ್ರವೂ, ಯಜನ, ಯಾಜನ, ದೀಕ್ಷಾ, ಸಂಸ್ಕಾರಗಳೂ, ಕೃಛ್ರಚಾಂದ್ರಾಯಣಾದಿ ಪಾಪನಿವಾರಣೆಗೋಸ್ಕರ ಆಚರಿಸುವ ತಪಸ್ಸುಗಳೂ, ಯಜ್ಞಾಂಗಭೂತವಾದ ಕಾಲಗಳೂ, ಏಕಾಶನಾದಿ ವ್ರತಗಳೂ (ಒಂದೇಹೊತ್ತು ಊಟಮಾಡುವ ವ್ರತಗಳೂ) ಹಗಲುರಾತ್ರಿಗಳಲ್ಲಿ ಸುರಿಯುವ ಮಳೆಯಿಂದ ಸಸ್ಯಸಮೃದ್ಧಿಯೂ, ನನ್ನ ಯಜ್ಞದಿಂದ ಅತಿಶಯವಾಗಿ ಉಂಟಾಗಲಿ. ಮತ್ತು ಎಲೈ ಫಾಲನೇತ್ರನೇ, ಈ ನನ್ನ ಯಜ್ಞದಿಂದ ಬೃಹತ್, ರಥಂತರ ಎಂಬ ಸಾಮಗಳು, ತಮ್ಮ ತಮ್ಮ ಸ್ತುತಿವ್ಯವಹಾರಗಳಲ್ಲಿ ಸಮರ್ಥವಾಗಲಿ. ॥೧೫೯-೧೬೦-೧೬೧-೧೬೨॥

ಗರ್ಭಾ ವತ್ಸಾಶ್ಚ ಭಗವನ್ತ್ರ್ಯವಿಶ್ಚಾಸ್ತು ಮಹೇಶ್ವರ ।
ತ್ರ್ಯವೀ ಚ ಮೇ ದಿತ್ಯವಾಟ್ಚ ದಿತ್ಯೌಹೀ ಚ ಸದಾಶಿವ ॥೧೬೩॥

ಪಂಚಾವಿಶ್ಚ ಮಹಾದೇವ ಪಂಚಾವೀ ಚ ತ್ರಿಲೋಚನ ।
ತ್ರಿವತ್ಸಶ್ಚ ತ್ರಿವತ್ಸಾ ಚ ತುರ್ಯವಾಟ್ಯೈವ ಮೇ ಪ್ರಭೋ ॥೧೬೪॥

ತುರ್ಯೌಹೀ ಪಷ್ಠವಾಚ್ಚಾಸ್ತು ಪಷ್ಠೌಹೀ ಚ ಮಹೇಶ್ವರ ।
ಉಕ್ಷಾ ವಂಶಾ ಚ ಋಷಭೋ ವೇಹನ್ನಡ್ವಾನ್ ತಥಾಸ್ತು ಮೇ ॥೧೬೫॥

ಧೇನುರಪ್ಯಸ್ತು ಭಗವನ್ನಿತ್ಯೇರಾಯಾತಿಮನೋಹರಾ ।
ಯಜ್ಞೇನ ಕಲ್ಪತಾಮಾಯುಃ ಪ್ರಾಣೋ ಯಜ್ಞೇನ ಕಲ್ಪತಾಂ ॥೧೬೬॥

---

ಮಹೇಶ್ವರನೇ, ನನ್ನ ಹಸುಗಳು ಗರ್ಭತಾಳಲಿ. ಯಾವಾಗಲೂ ಎಳೆಗರುಗಳು ನನ್ನ ಮನೆಯಲ್ಲಿರಲಿ. (ಆರುತಿಂಗಳಿನ ಕರುವಿಗೆ ವತ್ಸ ಎಂದು ವ್ಯವಹಾರವಿದೆ) ಎತ್ತುಗಳೂ, (ತ್ರ್ಯವಿಃ) ಹಸುಗಳೂ, (ತ್ರ್ಯವೀ) ಎರಡು ವರ್ಷದ ಗೂಳಿಯೂ, (ದಿತ್ಯವಾಟ್) ಎರಡು ವರ್ಷದ ಹಸುವೂ, (ದಿತ್ಯೌಹೀ) ಎರಡೂವರೆ ವರ್ಷ ವಯಸ್ಸಿನ ಗೂಳಿಯೂ (ಪಂಚಾವಿಃ) ಎರಡೂವರೆ ವರ್ಷದ ಹಸುವೂ (ಪಂಚಾವೀ) ನನ್ನ ಗೃಹದಲ್ಲಿ ಓಡಾಡುತ್ತಿರಲಿ. ಓ ಪ್ರಭೋ, ಮಹಾದೇವನೇ, ತ್ರಿಲೋಚನನೇ, ಮೂರು ವರ್ಷದ ವೃಷಭವೂ (ತ್ರಿವತ್ಸಃ) ಮತ್ತು ಮೂರು ವರ್ಷದ ಹಸುವೂ (ತ್ರಿವತ್ಸಾ) ಮೂರೂವರೆ ವರ್ಷ ವಯಸ್ಸಿನ ಹಸುವೂ (ತುರ್ಯೌಹೀ) ನನಗೆ ದೊರೆಯಲಿ. ಎಲೈ ಸದಾ ಮಂಗಳಸ್ವರೂಪನಾದ ಮಹೇಶ್ವರನೇ, ನಾಲ್ಕು ವರ್ಷದ ಗೂಳಿಯೂ (ಪಷ್ಠವಾಟ್) ಅದೇ ನಾಲ್ಕು ವರ್ಷದ ಹಸುವೂ (ಪಷ್ಠೌಹೀ) ಬೀಜದ ಹೋರಿಯೂ, (ಉಕ್ಷಾ) ಗೊಡ್ಡು ಹಸುವೂ (ವಶಾ) ಎತ್ತುಗಳೂ (ಋಷಭ) ಗರ್ಭದಲ್ಲೇ ಕರುಗಳು ಸಾಯುವ ಹಸುಗಳೂ (ವೇಹತ್) ಗಾಡೀ ಎತ್ತುಗಳೂ, (ಅನಡ್ವಾನ್) ಮತ್ತು ಹಾಲಿಗೋಸ್ಕರ ಮನೋಹರವಾದ ಮತ್ತು ಹೊಸದಾಗಿ ಕರು ಹಾಕಿರುವ ಹಸುವೂ (ಧೇನುಃ) ನನಗೆ ಲಭಿಸಲಿ. ಅಂದರೆ ಪಶುಸಮೃದ್ಧಿಯು ನನ್ನ ಗೃಹದಲ್ಲಿ ಸರ್ವದಾ ತೋರಿಬರಲಿ. ||೧೬೩-೧೬೪-೧೬೫||

ಮಹಾದೇವನೇ, ನಾನು ಅನುಷ್ಠಾನಮಾಡುವ ಯಾಗದಿಂದ ನನಗೆ ಆಯುಷ್ಯವು ಅಭಿವೃದ್ಧಿಯಾಗಲಿ. ಪ್ರಾಣವಾಯುವು ಶಾಶ್ವತವಾಗಿರಲಿ. ಅಪಾನವಾಯುವು ವ್ಯಾನವಾಯುವಿನೊಡನೆ ಸ್ಥಿರವಾಗಿರಲಿ. ಕಣ್ಣು, ಕಿವಿ ಇವುಗಳೂ

ಅಪಾನೋಽಪಿ ಚ ಯಜ್ಞೇನ ವ್ಯಾನೇನ ಸಹ ಕಲ್ಪತಾಂ ।
ಚಕ್ಷುಃ ಶ್ರೋತ್ರಂ ಚ ಯಜ್ಞೇನ ಮನಸಾ ಸಹ ಕಲ್ಪತಾಂ ॥೧೬೭॥

ವಾಗಾತ್ಮಾಪಿ ತಥಾ ಯಜ್ಞೋಽಪ್ಯೇವಂ ಯಜ್ಞೇನ ಕಲ್ಪತಾಂ ।
ತ್ವದಧೀನಮಿದಂ ಸರ್ವಂ ತವೇತಿ ಪ್ರಾರ್ಥಿತಂ ಮಯಾ ॥೧೬೮॥

ಸರ್ವಸ್ವತಂತ್ರೋಽಸಿ ಮಹೇಶ ಯಸ್ಮಾ
ತ್ತ್ವಮೇವ ದಾತಾಸಿ ಸದಾಪಿ ದೇಯಾಃ ।
ಉಕ್ತಾಶ್ಚ ತಾವಚ್ಚಮಕೇನ ದೇಹಿ
ತಾನಸ್ವತಂತ್ರಾಂಛಿವಪೂಜಕಾಯ ॥೧೬೯॥

ತೇಷಾಂ ಪ್ರದೇಯತ್ವವಿನಿಶ್ಚಯೇನ
ತಾಂದೇಹಿ ಮಹ್ಯಂ ಶಿವಪೂಜಕಾಯ ।

---

ಮನಸ್ಸಿನೊಡನೆ ಈ ಯಜ್ಞದಿಂದ ತಮ್ಮ ತಮ್ಮ ದರ್ಶನ ಮತ್ತು ಶ್ರವಣ ಕಾರ್ಯಗಳಲ್ಲಿ ಸಮರ್ಥವಾಗಲಿ. (ಸರಿಯಾಗಿ ನಡೆಯಲಿ) ವಾಕ್ಕು, ಆತ್ಮಾ (ಶರೀರ) ಮುಂದೆ ಆಚರಿಸುವ ಅಶ್ವಮೇಧಾದಿ ಯಾಗಗಳೂ ಇವೆಲ್ಲವೂ ಈ ಯಜ್ಞದಿಂದ ಸರಿಯಾಗಿರಲಿ. ಓ ಮಹೇಶ್ವರನೇ, ಇವೆಲ್ಲವೂ ನಿನ್ನ ಅಧೀನವಾಗಿರುವುದರಿಂದ ನಾನು ಈರೀತಿ ನಿನ್ನನ್ನು ಪ್ರಾರ್ಥನೆಮಾಡುತ್ತಿರುವೆನು. ||೧೬೬-೧೬೭-೧೬೮||

ಮಹೇಶ್ವರನೇ, ನೀನು ಸರ್ವಸ್ವತಂತ್ರನು (ಎಲ್ಲಾ ವಿಷಯದಲ್ಲಿಯೂ ಮತ್ತೊಬ್ಬರ ನಿಯಮಗಳಿಲ್ಲದೇ ನಡೆಯುವ ಪ್ರಭಾವವುಳ್ಳವನು) ನೀನೇ ಸಕಲ ಇಷ್ಟಾರ್ಥಗಳನ್ನೂ ಕೊಡುವವನಿದ್ದೀಯೆ. ನಿನಗೆ ಯಾರು ತಾನೇ ಏನು ಕೊಡಬಲ್ಲರು? ಮಹಾದೇವನೇ, ಚಮಕಸ್ತೋತ್ರದಲ್ಲಿ ಹೇಳಿರುವ ಮತ್ತು ನನ್ನ ಸ್ವತಂತ್ರವಲ್ಲದ ಇಷ್ಟಾರ್ಥಗಳನ್ನು ಶಿವಪೂಜಕನಾದ ನನಗೆ ಅನುಗ್ರಹಿಸು. ||೧೬೯||

ಚಮಕದಲ್ಲಿ ಹೇಳಿರುವ ವರಗಳನ್ನು ಕೊಡಲೇ ಬೇಕೆಂದು ನಿಶ್ಚಯಮಾಡಿರುವ ದೇವದೇವನೇ! ಅವುಗಳನ್ನು ಶಿವಪೂಜಕನಾದ ನನಗೆ ಕೊಡು. ಮಹೇಶ್ವರನೇ, ನೀನು ಕೊಡುವ ವರಗಳು ನನ್ನ ಗೃಹಕೃತ್ಯಗಳಿಗೆ ನಿಜವಾಗಿಯೂ ಯೋಗ್ಯವಾಗುವುವು. ಶಿವಪೂಜಾಧುರೀಣನಾದ ನಾನೂ ಯೋಗ್ಯನೆಂಬುದು ನಿನಗೆ

ತೇ ತಾವದಸ್ಮದ್ಗೃಹಕರ್ಮಯೋಗ್ಯಾಃ
ಯೋಗ್ಯೇನ ಯೋಗ್ಯಸ್ಯ ಕಿಲಾನ್ವಯೋಽಪಿ ॥೧೭೦॥

ಏತೇ ಪದಾರ್ಥಾಃ ಪ್ರಥಿತಾಸ್ತ್ವದೀಯಾ
ಸ್ತೇ ಶರ್ವ ದೇಯಾಸ್ತವ ದಾನಯೋಗ್ಯಾಃ ।
ಅಹಂ ಶಿವಾರಾಧನಸಕ್ತಚಿತ್ತಃ
ಕೋ ವಾ ಮದನ್ಯೋಽಸ್ತಿ ಸ ದಾನಯೋಗ್ಯಃ ॥೧೭೧॥

ದಾತಾಪಿ ದೇಯೇ ಸತಿ ದಾನಯೋಗ್ಯಂ
ವಿಹಾಯ ಕಸ್ಮೈ ಪ್ರದದಾತಿ ಭಕ್ತ್ಯಾ ।
ವಿದ್ವಾನತೋ ದೇಹಿ ಮಹೇಶ ತಾನ್ಮೇ
ಲೋಕೇ ಮದನ್ಯಸ್ತು ನ ಕೋಽಪಿ ಪಾತ್ರಂ ॥೧೭೨॥

---

ತಿಳಿದಿದೆ ಆ ನನ್ನ ಅನುಗ್ರಹದಿಂದ ಬರುವುದೂ ಯೋಗ್ಯವೇ ಆಗಿರುವುದು. ಲೋಕದಲ್ಲಿ ಸಂಬಂಧಗಳು ಸಾಧಾರಣವಾಗಿ ಯೋಗ್ಯರಿಗೇ, ಅಥವ ನೀಚರಿಗೇ ನಡೆಯುವುವು. ಹೀಗಿರುವುದರಿಂದ ಪ್ರಭೋ, ನನಗೆ ದಯವಿಟ್ಟು ನಾನು ಕೇಳಿದ ವರಗಳನ್ನು ದಯಪಾಲಿಸಬೇಕು. ॥೧೭೦॥

ಮಹೇಶ್ವರನೇ, ಈ ಪದಾರ್ಥಗಳೆಲ್ಲವೂ ಪ್ರಸಿದ್ಧವಾಗಿರುವುವು. ಇವೆಲ್ಲವೂ ನಿನ್ನವು. ದೇವ ! ಇವು ನೀನು ದಾನಮಾಡಲು ಯೋಗ್ಯವಾದ ಪದಾರ್ಥಗಳು. ನಾನು ಸದಾ ನಿನ್ನ ಆರಾಧನೆಯಲ್ಲಿಯೇ ನೆಟ್ಟಮನಸ್ಸುಳ್ಳವನಾಗಿರುವೆನು. ಹೀಗಿರುವಾಗ ನಿನ್ನ ಭಕ್ತನಾದ ನನಗಿಂತಲೂ ಈ ನಿನ್ನ ದಾನಕ್ಕೆ ಯೋಗ್ಯನಾದ ಪಾತ್ರನೆಲ್ಲಿರುವನು ? ॥೧೭೧॥

ದಾನಮಾಡುವ ಅಪೇಕ್ಷೆಯುಂಟಾದಾಗ ದಾನಶೀಲನಾದ ಯಜಮಾನನು ದಾನಯೋಗ್ಯನಾದವನನ್ನು ಬಿಟ್ಟು ಅಪಾತ್ರನಿಗೆ ಭಕ್ತಿಯಿಂದ ದಾನಮಾಡಲು ಹೇಗೆ ಪ್ರಯತ್ನಿಸಿಯಾನು ! ಆದುದರಿಂದ ಸರ್ವಜ್ಞನೆನಿಸಿದ ಮಹೇಶ್ವರನೇ ! ನನಗಿಂತಲೂ ಸತ್ಪಾತ್ರನು ಇಲ್ಲದಿರುವುದರಿಂದ, ಈ ಸತ್ಪಾತ್ರನಿಗೆ ಆ ವರಗಳನ್ನು ಕೊಟ್ಟು ಸಲಹು ॥೧೭೨॥

ತ್ವದ್ದತ್ತಮೇತಾದೃಶಭಾಗ್ಯಮೇತ್ಯ
ತ್ವತ್ಪಾದಪೂಜಾನಿರತೋ ಭವಾನಿ ।
ಪ್ರಮಾದಲೇಶೋಽಪಿ ತದಾ ನ ಭಾವಿ
ಭವೇ ಭವೇ ತ್ವತ್ಪದಪೂಜಕಸ್ಯ ॥೧೭೩॥

ಮಹಾಪ್ರಭುಃ ಶಂಭುರುಮಾಸಹಾಯೋ
ದಯಾಮಯೋ ಭೂತಿಮಯೋಽಪಿ ದಾತಾ ।
ಮಾತಾ ಪಿತಾ ಮೇ ಸ ಹಿತಪ್ರದಾತಾ
ಧಾತಾ ವಿಧಾತಾ ಪರಮೋತಸಂದೃಕ್ ॥೧೭೪॥

ಮನ್ಯೇ ಶಂಕರ ದೇವದೇವ ತವ ತದ್ದಾತೃತ್ವಮವ್ಯಾಹತಂ
ತೇನಾಗ್ನಿಪ್ರಮುಖಾನ್ಸುರಾನಪಿ ಸದಾ ತ್ವಾನ್ನಸ್ವತಂತ್ರಾನ್ಸ್ವತಃ ।
ಮಹ್ಯಂ ದೇಹಿ ಮದಿಚ್ಛಯಾ ಪರಮಿಮಾ ಕುರ್ವಂತು ಕೃತ್ಯಾನಿ ಮೇ
ಶಕ್ತಿರ್ಯಸ್ಯ ಯಥಾ ಯಥಾಸ್ತಿ ಭಗವನ್ಸರ್ವಸ್ವತಂತ್ರ ಪ್ರಭೋ ॥೧೭೫॥

---

ನೀನು ಕರುಣಿಸಿದ ಈ ಭಾಗ್ಯವನ್ನು ಸ್ವೀಕರಿಸಿ, ಆ ಐಶ್ವರ್ಯದಿಂದ ಸದಾ ನಿನ್ನ ಪಾದಪೂಜಾಪರಾಯಣನಾಗುವೆನು. ಮಹೇಶ್ವರನೇ ನಿನ್ನ ಪಾದಪೂಜಕನಾದ ನಾನು ಅಲ್ಪಾಪರಾಧವನ್ನೂ ಸಹ ಎಂದೂ ಮಾಡಲಾರೆನು. ಪ್ರತಿಜನ್ಮದಲ್ಲಿಯೂ ನಿನ್ನ ಪಾದಸೇವೆಯನ್ನು ಮಾಡುವ ನನಗೆ ನಿನ್ನಲ್ಲಿ ಅಪರಾಧವು ಹೇಗೆ ತಾನೇ ಉಂಟಾದೀತು ? ॥೧೭೩॥

ಉಮಾಪತಿಯಾದ ಶಂಭುವು ಮಹಾಪ್ರಭುವು, ದಯಾಸ್ವರೂಪನು, ಸಕಲೈಶ್ವರ್ಯಗಳನ್ನೂ ಕೊಡತಕ್ಕವನು. ಮತ್ತು ದಾನಶೀಲನು. ತಾಯಿ, ತಂದೆ, ಬಂಧುಬಳಗ ಮುಂತಾದವರೆಲ್ಲರೂ ನನಗೆ ಆ ಪರಶಿವನೇ ಆಗಿರುವನು. ಧಾತೃವೂ (ಬ್ರಹ್ಮನೂ) ವಿಧಾತೃವೂ ಸಹ ಪರಮೋತಸಂದೃಕ್ (ಪರರ ಹೃದಯವನ್ನರಿಯುವವನೂ) ಎನಿಸಿದ ಆ ಪರಮೇಶ್ವರನೇ ಆಗಿರುವನು. ॥೧೭೪॥

ಎಲೈ ದೇವದೇವನೆನಿಸಿದ ಶಂಕರನೇ, ನಿನ್ನ ದಾನಮಾಡುವಿಕೆಯು ತಡೆಯಿಲ್ಲದುದು. ಈ ದಾನಮಹಿಮೆಯಿಂದ ಸ್ವತಂತ್ರರಲ್ಲದೇ ನಿನ್ನ ಅಧೀನರಾಗಿರುವ ಆ ಇಂದ್ರಾದಿದೇವತೆಗಳನ್ನೆಲ್ಲಾ ನನಗೆ ಅನುಗ್ರಹಿಸು. ಈ ಅಗ್ನಿಯೇ ಮುಂತಾದ ದೇವತೆಗಳು ನಿನ್ನಿಚ್ಛೆಯಂತೆ ಅವರವರ ಶಕ್ತ್ಯನುಸಾರ ನನ್ನ ಮನೆಯಲ್ಲಿ ಕೆಲಸ

**ದೇಯತ್ವೇನ ವಿನಿಶ್ಚಿತಾಸ್ತವ ಸುರಾಃ ಸರ್ವೇಽಪಿ ವೇದೈರಪಿ**
**ದಾತಾ ತ್ವಂ ತವ ಭಾಗ್ಯಮಪ್ಯವಿಲಯಂ ಭೂಯಃ ಸಮುಜ್ಜೃಂಭತೇ ।**
**ಅಸ್ಮಾಕಂ ತು ಮಹಾಪ್ರಭುರ್ಭವಾನ್ಯೇವೇತಿ ಚಿತ್ತಂ ಮುಹುಃ**
**ಸ್ವಾನಂದಾಂಬುಧಿವೀಚಿಕಾತಿಚಪಲಾ ಲೀಲಾವಿಲಾಸಾಸ್ಪದಂ ॥೧೭೬॥**

**ಇತಿ ಶ್ರೀ ಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಪೂರ್ವಾರ್ಧೇ**
**ಶಿಲಾದತಪೋವರ್ಣನಂ ಶಿಲಾದಕೃತಚಮಕವಿಧಾನಪ್ರಾರ್ಥನಂ ನಾಮ**
**ಚತುಸ್ತ್ರಿಂಶೋಽಧ್ಯಾಯಃ**

---

ವನ್ನು ಮಾಡಿಕೊಂಡಿರಲಿ. ಸರ್ವಸ್ವತಂತ್ರನಾದ ಪ್ರಭುವೇ, ನನ್ನಿಷ್ಟಾರ್ಥವನ್ನು ನೆರವೇರಿಸು. ||೧೭೫||

ಮಹೇಶ್ವರನೇ, ಸಕಲ ದೇವತೆಗಳೂ ನಿನ್ನಿಂದ ದಾನ ಹೊಂದಲು ನಿಶ್ಚಯಿಸಲ್ಪಟ್ಟಿರುವರು. ನೀನೇ ದಾನಮಾಡುವ ಯಜಮಾನನು. ನಿನ್ನ ಭಾಗ್ಯವಾದರೋ ನಾಶರಹಿತವೆನಿಸಿ ಅಪಾರವಾಗಿರುವುದು. ಇದೇ ವಿಷಯವನ್ನೇ ಸಕಲ ವೇದಗಳೂ ಸಾರುತ್ತಿರುವುವು. ನಮಗಾದರೋ ನೀನೇ ಮಹಾಪ್ರಭುವು. ಎಲೈ ಭವಸಂಜ್ಞಕನಾದ ದೇವದೇವನೇ, ನೀನೇ ನಮಗೆ ಸರ್ವಸ್ವವೂ ಎಂದು ಮನಸ್ಸಿನಲ್ಲಿ ಪದೇ ಪದೇ ಧ್ಯಾನಮಾಡುತ್ತಾ, ತದ್ರೂಪವಾದ ಆನಂದವೆಂಬ ಸಮುದ್ರದಲ್ಲಿ ಅತಿ ಚಂಚಲವಾದ ಅಲೆಗಳ ಲೀಲಾವಿಲಾಸಗಳಿಗೆ ಸಿಕ್ಕಿ ನಾವು ಧನ್ಯರಾಗಿರುವೆವು. ||೧೭೬||

ಇಲ್ಲಿಗೆ ಶ್ರೀಶಿವರಹಸ್ಯದ ಹರಸಂಜ್ಞಕವಾದ ಮೂರನೆಯ ಭಾಗದ ಪೂರ್ವಾರ್ಧದಲ್ಲಿ
ಶಿಲಾದನ ತಪಸ್ಸಿನ ವರ್ಣನೆ ಮತ್ತು ಆ ಶಿಲಾದನು ಮಾಡಿದ ಚಮಕವಿಧ
ಪೂರ್ವಕ ಪ್ರಾರ್ಥನೆಗಳೆಂಬ ಮೂವತ್ತುನಾಲ್ಕನೆಯ ಅಧ್ಯಾಯವು
ಮುಗಿದುದು.

